2) ಶಿವಮೊಗ್ಗ ಸಹಕಾರ ಹಾಲು ಒಕ್ಕೂಟದ ನಿರ್ವಾಹಕ ನಿರ್ದೇಶಕರ ಪತ್ರ ಸಂಖ್ಯೆ: ಶಿಹಾಒ/ಶೇಮತಾಂ/ಸಮಾಪನೆ/5464/2008–09/ ದಿನಾಂಕ:05.11.2008.
3) ಈ ಕಛೇರಿಯ ಕಾರಣ ಕೇಳಿ ನೋಟೀಸು/ಸಮಸಂಖ್ಯೆ: ದಿನಾಂಕ:25.11.2008.
4) ಸಹಕಾರ ಅಭಿವೃದ್ಧಿ ಅಧಿಕಾರಿಗಳು ಭದ್ರಾವತಿ ಇವರ ಪತ್ರ ಸಅಅ/ಭದ್ರಾವತಿ/ ಸಮಾಪನೆ/ಎಂಪಿಸಿಎಸ್/ಕಾಗೆಕೋಡಮಗ್ಗೆ/ 2008–09/ ದಿನಾಂಕ:20.12.2008.

**ಪ್ರಸ್ತಾವನೆ:**

ಉಲ್ಲೇಖ (1) ಮತ್ತು (2)ರ ಪತ್ರದಲ್ಲಿ ಶಿವಮೊಗ್ಗ ಉಪವಿಭಾಗದ ಸಹಕಾರ ಸಂಘಗಳ ಸಹಾಯಕ ನಿಬಂಧಕರು ಮತ್ತು ಕಾರ್ಯನಿರ್ವಾಹಕ ನಿರ್ದೇಶಕರು, ಹಾಲು ಉತ್ಪಾದಕರ ಸಹಕಾರ ಸಂಘ ನಿ., ಕಾಗೇಕೋಡಮಗ್ಗೆ, ಭದ್ರಾವತಿ ತಾಲ್ಲೂಕು ಈ ಸಂಘವು ನಿಷ್ಕ್ರಿಯಗೊಂಡಿದ್ದು, ಹಾಲು ಸಂಗ್ರಹಣೆ ಸ್ಥಗಿತಗೊಳಿಸಲಾಗಿದೆ. ಸದರಿ ಸಂಘವು 12 ತಿಂಗಳುಗಳಿಂದ ಸಂಪೂರ್ಣ ಸ್ಥಗಿತಗೊಂಡಿರುತ್ತದೆಂದು ವರದಿಸಿರುತ್ತಾರೆ. ಸಂಘದ ಸದಸ್ಯರುಗಳು ಹಾಲು ಸರಬರಾಜು ಮಾಡಲು ಆಸಕ್ತಿಹೊಂದಿರುವುದಿಲ್ಲ. ಆದ್ದರಿಂದ ಈ ಸಹಕಾರ ಸಂಘವನ್ನು ಮುಂದುವರಿಸುವ ಅಗತ್ಯವಿರುವುದಿಲ್ಲ. ಹಾಲು ಉತ್ಪಾದಕರ ಸಹಕಾರ ಸಂಘ ನಿ., ಕಾಗೇಕೋಡಮಗ್ಗೆ, ಭದ್ರಾವತಿ ತಾಲ್ಲೂಕು ಈ ಸಂಘವನ್ನು ಸಮಾಪನೆಗೊಳಿಸಲು ಶಿಫಾರಸ್ಸು ಮಾಡಿರುತ್ತಾರೆ. ಅವರ ಶಿಫಾರಸ್ಸಿನ ಮೇರೆಗೆ ಈ ಕಛೇರಿಯಿಂದ ಉಲ್ಲೇಖ (3)ರಲ್ಲಿ ಸಂಘದ ನಿರ್ದೇಶಕರುಗಳಿಗೆ ಸಹಕಾರ ಕಾಯ್ದೆ ಕಲಂ 72 ರನ್ವಯ ಈ ಸಂಘವನ್ನು ಏಕೆ ಸಮಾಪನೆಗೊಳಿಸಬಾರದು ಎಂಬ ಬಗ್ಗೆ ಕಾರಣ ಕೇಳಿ ನೋಟೀಸನ್ನು ಜಾರಿ ಮಾಡಲಾಗಿತ್ತು. ನಿಗದಿತ ಅವಧಿಯೊಳಗೆ ಉತ್ತರವನ್ನು ಸಲ್ಲಿಸಲು ಅವಕಾಶ ನೀಡಲಾಗಿತ್ತು. ಆದರೆ ಆಡಳಿತ ಮಂಡಳಿ ನಿರ್ದೇಶಕರುಗಳು ತಮ್ಮ ಸಮಜಾಯಿಷಿಯನ್ನು ನೀಡಿರುವುದಿಲ್ಲ. ಆದ್ದರಿಂದ ಈ ಸಹಕಾರ ಸಂಘವನ್ನು ನಡೆಸಲು ಆಸಕ್ತಿ ಇರುವುದಿಲ್ಲವೆಂದು ದೃಢಪಟ್ಟಿದೆ. ಪ್ರಯುಕ್ತ ಸಮಾಪನೆಗೊಳಿಸುವುದು ಸೂಕ್ತವೆಂದು ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಆದೇಶ**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72(2)ರನ್ವಯ ಮತ್ತು ಕರ್ನಾಟಕ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ/69/ಸಿಎಲ್ಎಂ/ದಿನಾಂಕ:21.11.2001ರಲ್ಲಿ ದತ್ತವಾದ ಅಧಿಕಾರದನ್ವಯ, ಸಿ.ಎನ್. ದೇವರಾಜ್, ಸಹಕಾರ ಸಂಘಗಳ ಉಪನಿಬಂಧಕರು, ಶಿವಮೊಗ್ಗಜಿಲ್ಲೆ, ಶಿವಮೊಗ್ಗ ಆದ ನಾನು, ಹಾಲು ಉತ್ಪಾದಕರ ಸಹಕಾರ ಸಂಘ ನಿ., ಕಾಗೆಕೋಡಮಗ್ಗೆ, ಭದ್ರಾವತಿ ತಾ: ಈ ಸಂಘವನ್ನು ಸಮಾಪನೆಗೊಳಿಸಿ ಆದೇಶಿಸಿರುತ್ತೇನೆ. ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 73ರನ್ವಯ ಸಮಾಪನಾಧಿಕಾರಿಯಾಗಿ ಸಹಕಾರ ಅಭಿವೃದ್ಧಿ ಅಧಿಕಾರಿಗಳು, ಭದ್ರಾವತಿ ಇವರನ್ನು ನೇಮಕ ಮಾಡಲಾಗಿದೆ. ಸಮಾಪನಾಧಿಕಾರಿಯವರು ಈ ಆದೇಶದ 30 ದಿನಗಳೊಳಗಾಗಿ ಸಂಘದ ಪ್ರಭಾರವನ್ನು ಪಡೆದು ನಡವಳಿಕೆ ನಡೆಸತಕ್ಕದ್ದು.

ಈ ಆದೇಶವನ್ನು ಈ ದಿನ ದಿನಾಂಕ:ಇಪ್ಪತ್ತಮೂರನೇ ಡಿಸೆಂಬರ್, 2008ರಂದು ಸ್ವಸಹಿ ಮತ್ತು ಕಛೇರಿ ಮೊಹರಿನೊಂದಿಗೆ ಹೊರಡಿಸಲಾಗಿದೆ.

**ಸಿ.ಎನ್. ದೇವರಾಜ್**
ಸಹಕಾರ ಸಂಘಗಳ ಉಪ ನಿಬಂಧಕರು,
ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ.

ಪಿ.ಆರ್.93

**ಕಾರ್ಮಿಕ ಅಧಿಕಾರಿ ವ ಕಾರ್ಮಿಕ ಆಯುಕ್ತರ ನ್ಯಾಯಾಲಯ, ಉಪವಿಭಾಗ–2,**
**ಬಿಜಾಪುರ ಜಿಲ್ಲೆ, ಬಿಜಾಪುರ**

**ಪ್ರ.ಸಂ. ಡಬ್ಲ್ಯೂಸಿಎ:ಎಸ್ಆರ್–201/08, ದಿನಾಂಕ:31ನೇ ಡಿಸೆಂಬರ್, 2008**

| **ಅರ್ಜಿದಾರರು** | **ಪ್ರತಿವಾದಿಗಳು** |
|---|---|
| ಶ್ರೀಮತಿ ಶಾರದಾ ಕೋಂ ಪಂಡಿತ ರಾಠೋಡ ಮತ್ತು ಇತರರು, ಸಾ: ಆಲೂರ ಎಲ್‌ಸಿ, ತಾ: ಇಂಡಿ, ಜಿಲ್ಲೆ: ಬಿಜಾಪುರ. | 1) ಶ್ರೀ ಸೀತಾರಾಮ ತಂದೆ ವಾಲು ಲಮಾಣಿ, ಸಾ: ಆಲೂರ, ತಾ: ಇಂಡಿ, ಜಿಲ್ಲೆ: ಬಿಜಾಪುರ.<br>2) ದಿ ಡಿವಿಜನಲ್ ಮ್ಯಾನೇಜರ್, ಯುನೈಟೆಡ್ ಇಂಡಿಯಾ ಇನ್ಸೂರೆನ್ಸ್ ಕಂ.ಲಿ., ಬಿಜಾಪುರ. |

**ಪ್ರಕಟಣೆ**

ಮೇಲ್ಕಾಣಿಸಿದ ಅರ್ಜಿದಾರರು ಈ ನ್ಯಾಯಾಲಯದಲ್ಲಿ ಅರ್ಜಿಯೊಂದನ್ನು ಸಲ್ಲಿಸಿ, ಶ್ರೀ ಪಂಡಿತ ಸೀತಾರಾಮ ರಾಠೋಡ ಇವರು ಪ್ರತಿವಾದಿಗಳ ಬಳಿ ಕೆಲಸ ನಿರ್ವಹಿಸುವಾಗ ಮತ್ತು ಕೆಲಸದ ಪರಿಣಾಮದಿಂದಾಗಿ ದಿನಾಂಕ: 25.01.2008ರಂದು ಅಪಘಾತಕ್ಕೀಡಾಗಿ ಮೃತನಾಗಿರುತ್ತಾನೆಂದು, ಅಲ್ಲದೇ ತಾವು ಮೃತರ ಅವಲಂಬಿತರಾಗಿರುವುದರಿಂದ ಕಾಯ್ದೆಯನ್ವಯ ತಮಗೆ ಬರಬೇಕಾದ ಪರಿಹಾರದ ಹಣವನ್ನು ಪ್ರತಿವಾದಿಗಳಿಂದ ಕೊಡಿಸಿಕೊಡಬೇಕೆಂದು ವಿನಂತಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಹಾಗೂ ಅರ್ಜಿದಾರರಲ್ಲದೇ ತಾವೇನಾದರೂ ಮೃತರ ನಿಜವಾದ ಅವಲಂಬಿತರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೇ, ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನಗಳೊಳಗಾಗಿ ತಮ್ಮ ಪರ ಆಕ್ಷೇಪಣೆಯಾಗಲೀ ಅಥವಾ ಅರ್ಜಿಯಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸಬೇಕು. ಹಾಗೂ ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆ ಮತ್ತು ಅರ್ಜಿಗಳು ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು. ತದನಂತರ ಬಂದ ಅರ್ಜಿಗಳನ್ನು ಮತ್ತು ಆಕ್ಷೇಪಣೆಗಳನ್ನು ಸ್ವೀಕರಿಸಲಾಗುವುದಿಲ್ಲ.

ಕಾರ್ಮಿಕ ಅಧಿಕಾರಿ ವ ಕಾರ್ಮಿಕ ನಷ್ಟ ಪರಿಹಾರ
ಪಿ.ಆರ್.66 ಆಯುಕ್ತರು, ಉಪವಿಭಾಗ–2, ಬಿಜಾಪುರ.

**ಕಾರ್ಮಿಕ ಅಧಿಕಾರಿ ವ ಕಾರ್ಮಿಕ ಆಯುಕ್ತರ ನ್ಯಾಯಾಲಯ, ಉಪವಿಭಾಗ–2,**
**ಬಿಜಾಪುರ ಜಿಲ್ಲೆ, ಬಿಜಾಪುರ**

**ಪ್ರ.ಸಂ. ಡಬ್ಲ್ಯೂಸಿಎ:ಎಸ್ಆರ್–1/2009, ದಿನಾಂಕ:1ನೇ ಜನವರಿ, 2009**

| **ಅರ್ಜಿದಾರರು** | **ಪ್ರತಿವಾದಿಗಳು** |
|---|---|
| ಶ್ರೀಮತಿ ಸೈಯದ್ ಗಂಡ ಸೈಯದ್ ರಸೂಲ ಕಾಮನಕೇರಿ ಮತ್ತು ಇತರರು ಸಾ: ಕೆ.ಸಾಲವಾಡಗಿ, ತಾ:ಬಿ.ಬಾಗೇವಾಡಿ, ಜಿಲ್ಲೆ:ಬಿಜಾಪುರ. | 1) ಶ್ರೀ ಗುರಣ್ಣ ತಂದೆ ಶಿವಪ್ಪ ಹಡಪದ, ಸಾ: ಮಿಣಜಗಿ, ತಾ: ಮುದ್ದೇಬಿಹಾಳ, ಜಿಲ್ಲೆ: ಬಿಜಾಪುರ.<br>2) ದಿ ಬ್ರ್ಯಾಂಚ್ ಮ್ಯಾನೇಜರ್ ಯುನೈಟೆಡ್ ಇಂಡಿಯಾ ಇನ್ಶೂರೆನ್ಸ್ ಕಂ.ಲಿ., ಬಿಜಾಪುರ. |

**ಪ್ರಕಟಣೆ**

ಮೇಲ್ಕಾಣಿಸಿದ ಅರ್ಜಿದಾರರು ಈ ನ್ಯಾಯಾಲಯದಲ್ಲಿ ಅರ್ಜಿಯೊಂದನ್ನು ಸಲ್ಲಿಸಿ, ಶ್ರೀ ಸೈಯದ್ ರಸೂಲ ತಂದೆ ಮಶಾಕಸಾಬ, ಕಾಮನಕೇರಿ ಇವರು ಪ್ರತಿವಾದಿಗಳ ಬಳಿ ಕೆಲಸ ನಿರ್ವಹಿಸುವಾಗ ಮತ್ತು ಕೆಲಸದ ಪರಿಣಾಮದಿಂದಾಗಿ ದಿನಾಂಕ 15.12.2008ರಂದು ಅಪಘಾತಕ್ಕೀಡಾಗಿ ಮೃತನಾಗಿರುತ್ತಾನೆಂದು, ಅಲ್ಲದೇ ತಾವು ಮೃತರ ಅವಲಂಬಿತರಾಗಿರುವುದರಿಂದ ಕಾಯ್ದೆಯನ್ವಯ ತಮಗೆ ಬರಬೇಕಾದ ಪರಿಹಾರದ ಹಣವನ್ನು ಪ್ರತಿವಾದಿಗಳಿಂದ ಕೊಡಿಸಿಕೊಡಬೇಕೆಂದು ವಿನಂತಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಹಾಗೂ ಅರ್ಜಿದಾರರಲ್ಲದೇ ತಾವೇನಾದರೂ ಮೃತರ ನಿಜವಾದ ಅವಲಂಬಿತರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೇ, ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನಗಳೊಳಗಾಗಿ ತಮ್ಮ ಪರ ಆಕ್ಷೇಪಣೆಯಾಗಲೀ ಅಥವಾ ಅರ್ಜಿಯಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸಬೇಕು. ಹಾಗೂ ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆ ಮತ್ತು ಅರ್ಜಿಗಳು ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು. ತದನಂತರ ಬಂದ ಅರ್ಜಿಗಳನ್ನು ಮತ್ತು ಆಕ್ಷೇಪಣೆಗಳನ್ನು ಸ್ವೀಕರಿಸಲಾಗುವುದಿಲ್ಲ.

ಕಾರ್ಮಿಕ ಅಧಿಕಾರಿ ವ ಕಾರ್ಮಿಕ ನಷ್ಟ ಪರಿಹಾರ
ಪಿ.ಆರ್.67 ಆಯುಕ್ತರು, ಉಪವಿಭಾಗ–2, ಬಿಜಾಪುರ.

**ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಉಪ ಆಯುಕ್ತರು, ಕೊಡಗು ಜಿಲ್ಲೆ, ಮಡಿಕೇರಿ ಇವರ ಕಛೇರಿ ನಡವಳಿಗಳು**

**ಆದೇಶ ಸಂಖ್ಯೆ: ಇಎಕ್ಸ್ಇ:ಕೊ.ಜಿ.ಡಿಟಿಸಿಆರ್ಎಂ:361:2008–09, ದಿನಾಂಕ:23ನೇ ಡಿಸೆಂಬರ್, 2008**

| **ಫಿರ್ಯಾದುದಾರರು** | | **ಆರೋಪಿಗಳು** |
|---|---|---|
| ಅಬಕಾರಿ ಉಪ ನಿರೀಕ್ಷಕರು, ಉಪವಿಭಾಗ, ಮಡಿಕೇರಿ. | **ವಿರುದ್ಧ** | 1) ಬಿಲ್ಲವರ ಪ್ರವೀಣ, ತಂದೆ ಪೌತಿ ಸೋಮಪ್ಪ, ಬೆಟ್ಟಗೇರಿ ಗ್ರಾಮ, ಮಡಿಕೇರಿ ತಾ:<br>2) ಬಂಟರ ಲೋಕೇಶ, ಬಿನ್ ಚನ್ನಪ್ಪ, ಕನ್ನಂಡಬಾಣೆ, ಮಡಿಕೇರಿ.<br>3) ಎಲಿಯಣ್ಣ ರೈ, ತಂದೆ ಪೌತಿ ಶಂಕರಪ್ಪ, ಕನ್ನಂಡಬಾಣೆ, ಮಡಿಕೇರಿ. |

**ಪ್ರಸ್ತಾವನೆ:**

ದಿನಾಂಕ:29.01.2003 ರಂದು ಅಬಕಾರಿ ಉಪ ನಿರೀಕ್ಷಕರು, ಉಪವಿಭಾಗ, ಮಡಿಕೇರಿ ಇವರು ತಾಳತ್ಮನೆ ಎಂಬಲ್ಲಿ ಕರ್ತವ್ಯದಲ್ಲಿರುವ ಸಮಯದಲ್ಲಿ ದೊರೆತ ಖಚಿತ ವರ್ತಮಾನದ ಮೇರೆಗೆ ಮಡಿಕೇರಿ ಕಡೆಯಿಂದ ಮಡಿಕೇರಿ ಮಂಗಳೂರು ರಸ್ತೆಯ ತಾಳತ್ ಮನೆ ಎಂಬಲ್ಲಿ ಸಿಎನ್ಓ–1017 ಸಂಖ್ಯೆಯ ಒಂದು ಕಾರು ಮಡಿಕೇರಿ ಕಡೆಯಿಂದ ಬಂದಿದ್ದು, ಇದನ್ನು ತಡೆದು ನಿಲ್ಲಿಸಿ ಸ್ಥಳದಲ್ಲಿದ್ದವರನ್ನು ಪಂಚರನ್ನಾಗಿ ಮಾಡಿಕೊಂಡು ಕಾರನ್ನು ಪರಿಶೋಧಿಸಿ ನೋಡಿದಾಗ ಅದರ ಡಿಕ್ಕಿಯಲ್ಲಿ 7 ಕಾರ್ಡ್ ಬೋರ್ಡ್ ಪೆಟ್ಟಿಗೆಗಳಿದ್ದು ಅವುಗಳಲ್ಲಿ ಮದ್ಯ ತುಂಬಿರುವುದು ಕಂಡುಬಂದಿದ್ದು, ಕಾರನ್ನು ಚಾಲನೆ

ಮಾಡುತ್ತಿದ್ದವರನ್ನು ಹೆಸರು ಕೇಳಲಾಗಿ ಎಲಿಯಣ್ಣ ರೈ ಎಂಬುದಾಗಿದ್ದು, ಹಿಂಭಾಗದ ಸೀಟಿನಲ್ಲಿ ಕೆ.ಪಿ. ಪ್ರವೀಣ್, ತಂದೆ ಸೋಮಪ್ಪ, ಬೆಟ್ಟಗೇರಿ ಗ್ರಾಮ ಮತ್ತು ವಿ.ಪಿ. ಲೋಕೇಶ್ ತಂದೆ ಚಿನ್ನಪ್ಪ ಕಣ್ಣಂಡಬಾಣೆ ಎಂಬುವವರು ಕುಳಿತಿದ್ದರು, ವಾಹನದ ಡಿಕ್ಕಿಯನ್ನು ತೆರೆದು ನೋಡಲಾಗಿ ಅದರಲ್ಲಿ 4 ಕಾರ್ಡ್‌ಬೋರ್ಡ್ ಪೆಟ್ಟಿಗೆಗಳಲ್ಲಿ 180 ಎಂಎಲ್‌ನ 48 ಅಂದರೆ ಒಟ್ಟು 196 New Janatha Brandy ಮದ್ಯದ ಬಾಟಲಿಗಳಿದ್ದವು ಹಾಗೂ ಇನ್ನು 3 ಪೆಟ್ಟಿಗೆಗಳಲ್ಲಿ 180 Ml x 144 New Janatha Rum ಇರುವುದು ಕಂಡು ಬಂದಿರುತ್ತದೆ. ಸದರಿ ಮದ್ಯ ಬಾಟಲಿಗಳನ್ನು ಸಾಗಿಸಲು ಸರ್ಕಾರದ ಪರವಾನಗಿ ಇದೆಯೇ ಎಂದು ಕೇಳಲಾಗಿ ಇಲ್ಲವೆಂದು ತಿಳಿಸಿದ ಮೇರೆಗೆ 15+15 x 180ml ಸೀಸೆಗಳನ್ನು ರಸಾಯನಿಕ ಪರೀಕ್ಷೆಗೆ ಮಾದರಿ ತೆಗೆಯಲಾಗಿರುತ್ತದೆ. ತದನಂತರ ರಹದಾರಿ ಇಲ್ಲದೆ ಮದ್ಯ ಸಾಗಾಣಿಕೆ ಮಾಡುತ್ತಿದ್ದದ್ದು ಅಬಕಾರಿ ಕಾನೂನಿಗೆ ವಿರೋಧವಾಗಿ ಕಂಡು ಬಂದಿದ್ದರಿಂದ ಆರೋಪಿಗಳನ್ನು ಮತ್ತು ಅಂಬಾಸಿಡರ್ ಕಾರನ್ನು ಇಲಾಖೆಯ ವಶಕ್ಕೆ ತೆಗೆದುಕೊಂಡು ಕರ್ನಾಟಕ ರಾಜ್ಯ ಅಬಕಾರಿ ಕಾಯಿದೆ 1965ರ ನಿಬಂಧನೆ 11, 13, 14, R/w 34, 38 ರಂತೆ ಮೊ.ಸಂ.34/2002–03, ದಿನಾಂಕ:29.01.2003 ರಂತೆ ಪ್ರಕರಣವನ್ನು ದಾಖಲಿಸಿಕೊಂಡು ಮುಂದಿನ ಕ್ರಮದ ಬಗ್ಗೆ ವರದಿ ಸಲ್ಲಿಸಿರುತ್ತಾರೆ.

ತದನಂತರ ದಿನಾಂಕ:31.01.2003ರಂದು ವಾಹನದ ಮಾಲೀಕರೆಂದು ಶ್ರೀ ಪುರುಷೋತ್ತಮ, ಮಂಗಳಾದೇವಿನಗರ, ಮಡಿಕೇರಿ, ಕೊಡಗು ಜಿಲ್ಲೆ ಇವರು ಅರ್ಜಿಯನ್ನು ಸಲ್ಲಿಸಿ ವಾಹನವನ್ನು ಬಿಡುಗಡೆಗೊಳಿಸಿ ಕೊಡಬೇಕೆಂದು ಅರ್ಜಿ ಸಲ್ಲಿಸಿರುತ್ತಾರೆ. ಈ ಬಗ್ಗೆ ಕ್ರಮ ಕೈಗೊಳ್ಳಲು ದಿನಾಂಕ:06.02.2003ರಂದು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಕೊಡಗು ಜಿಲ್ಲೆ, ಮಡಿಕೇರಿ ಇವರಿಗೆ ಪತ್ರ ಬರೆದು ವಾಹನದ ಮಾಲೀಕತ್ವದ ವಿವರ ಕೇಳಲಾಗಿರುತ್ತದೆ. ಮತ್ತೊಮ್ಮೆ ಸದರಿಯವರು ಅವರ ವಕೀಲರ ಮೂಲಕ ದಿನಾಂಕ:06.02.2003ರಂದು ಪ್ರಸ್ತಾವನೆಯನ್ನು ಸಲ್ಲಿಸಿ ವಾಹನವು ಅಬಕಾರಿ ಕಾಯ್ದೆ ಉಲ್ಲಂಘನೆಯ ಪ್ರಕರಣದಲ್ಲಿ ಬಾಗಿಯಾಗಿದ್ದು ಚಾಲಕನು ಮಾಲೀಕರ ಗಮನಕ್ಕೆ ಬಾರದಂತೆ ಮಾಡಿದ ಅಪರಾಧವಾಗಿರುತ್ತದೆ. ಕಾರನ್ನು ಬಾಡಿಗೆಗೆಂದು ಚಾಲಕನಿಗೆ ನೀಡಿದ್ದು, ಬಾಡಿಗೆಯಿಂದ ಬಂದ ಹಣದಿಂದ ಅವರ ಸಂಸಾರದ ಜೀವನ ನಿರ್ವಹಣೆ ನಡೆಯಬೇಕಾಗಿರುವುದರಿಂದ ಮತ್ತು ವಾಹನವನ್ನು ತೆರೆದ ಪ್ರದೇಶದಲ್ಲಿ ನಿಲ್ಲಿಸಿರುವುದರಿಂದ ಚಾಲನೆಯಿಲ್ಲದೇ ವಾಹನದ ಬಿಡಿಭಾಗಗಳು, ಹಾಳಾಗಿ ವಾಹನ ಕೆಡುವ ಸಂಭವವಿರುವುದರಿಂದ ವಾಹನವಿಲ್ಲದೇ ಜೀವನ ನಿರ್ವಹಣೆ ಕಷ್ಟಸಾಧ್ಯವಾದ್ದರಿಂದ ಸದರಿ ವಾಹನವನ್ನು ಮಧ್ಯಂತರಿಕವಾಗಿ ಬಿಡುಗಡೆ ಮಾಡಿಕೊಡಬೇಕಾಗಿ ಮನವಿ ಮಾಡಿಕೊಂಡಿರುತ್ತಾರೆ.

ದಿನಾಂಕ:13.02.2003ರಂದು ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಂದ ವಾಹನದ ಮಾಲೀಕತ್ವಕ್ಕೆ ಸಂಬಂಧಿಸಿದ ಬಿ ಎಕ್ಸ್‌ಟ್ರಾಕ್ಟ್‌ನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿದ್ದು, ಅದರಲ್ಲಿ ನಮೂದಿಸಿರುವಂತೆ ದಿನಾಂಕ:01.07.1994 ರಿಂದ ಪ್ರಕರಣ ದಾಖಲಾಗುವವರೆಗೂ ಕೆ.ಪುರುಷೋತ್ತಮ ಗೌಡ, ತಂದೆ ಶೇಷಪ್ಪ ಗೌಡ, ಮಂಗಳಾದೇವಿನಗರ, ಮಡಿಕೇರಿ ಇವರು ವಾಹನ ಸಂಖ್ಯೆ: ಸಿಎನ್‌ಒ–1017ರ ಅಧಿಕೃತ ಮಾಲೀಕರೆಂದು ತಿಳಿದುಬಂದಿರುತ್ತದೆ.

ಆದುದರಿಂದ ವಾಹನದ ಮಾಲೀಕರ ಮತ್ತು ವಕೀಲರ ಕೋರಿಕೆಯನ್ನು ತೆರೆದ ನ್ಯಾಯಾಲಯದಲ್ಲಿ ಚರ್ಚಿಸಿ ಸರ್ಕಾರದ ಆದಾಯದ ಭದ್ರತೆಯ ಹಿತ ದೃಷ್ಟಿಯಿಂದ ಮತ್ತು ವಾಹನವು ಕೊಡಗಿನ ಹವಾಮಾನದ ವೈಪರೀತ್ಯಕ್ಕೆ ಮಳೆ ಬಿಸಿಲಿನಿಂದ ಹಾಳಾಗುವ ಸಂಭವವಿರುವುದರಿಂದ ವಾಹನಕ್ಕೆ ಮೌಲ್ಯವನ್ನು ನಿಗದಿಪಡಿಸುವ ಬಗ್ಗೆ ವರದಿ ಪಡೆಯಲು ತೀರ್ಮಾನಿಸಿ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಗೆ ದಿನಾಂಕ:06.02.2003 ರಂದು ಪತ್ರ ಬರೆದು ಸದರಿ ವಾಹನವನ್ನು ಪರಿಶೀಲಿಸಿ ಅಂದಿನ ಮಾರ್ಕೆಟ್ ಮೌಲ್ಯವನ್ನು ನಿಗದಿಪಡಿಸುವಂತೆ ಕೋರಲಾಗಿತ್ತು. ಕೋರಿಕೆಯ ಮೇರೆಗೆ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ಪರಿಶೀಲಿಸಿ ದಿನಾಂಕ:22.02.2003 ರಂದು ವಶಪಡಿಸಿಕೊಂಡ ವಾಹನಕ್ಕೆ ರೂ.20,000/– (ರೂಪಾಯಿ ಇಪ್ಪತ್ತು ಸಾವಿರ) ಮೌಲ್ಯ ನಿಗದಿಪಡಿಸಿ ದೃಢೀಕರಣ ಪತ್ರ ನೀಡಿರುತ್ತಾರೆ. ಅದರಂತೆ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ಸದರಿ ವಾಹನಕ್ಕೆ ನಿಗದಿಪಡಿಸಿದ ಮೌಲ್ಯದ ಆಧಾರದ ಮೇಲೆ ಶ್ರೀ ಪುರುಷೋತ್ತಮ ಗೌಡ ತಂದೆ ಶೇಷಪ್ಪ ಗೌಡ ಅಂದಿನ ವಿಳಾಸ ರವಿಕಲಾ ಪ್ರೆಸ್, ಸುಳ್ಯ ಇವರಿಗೆ ಅಬಕಾರಿ ಕಾನೂನಿನಂತೆ ಕೆಲವು ಷರತ್ತುಗಳನ್ನು ವಿಧಿಸಿ, ಷರತ್ತುಗಳ ಆಧಾರದ ಹಿನ್ನೆಲೆಯಲ್ಲಿ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ವಿಧಿಸಿದ ವಾಹನದ ಮೌಲ್ಯಕ್ಕೆ ಸಮನಾಗಿ ರೂ.20,000/–ಗಳ 2 ವರ್ಷ ಅವಧಿಯುಳ್ಳ ಬ್ಯಾಂಕ್ ಗ್ಯಾರೆಂಟಿ ಸಂ:01/03, ದಿನಾಂಕ:27.02.2003ನ್ನು ವಿಜಯ ಬ್ಯಾಂಕ್, ಗದ್ದೆಹಳ್ಳ ಶಾಖೆ, ಸುಂಟಿಕೊಪ್ಪ, ಇವರಿಂದ ಭದ್ರತೆಯಾಗಿ ಪಡೆದುಕೊಂಡು ದಿನಾಂಕ:28.02.2003 ರಂದು ಆದೇಶ ಸಂ:ಇಎಕ್ಸ್‌ಇ:3:ಡಿಟಿಸಿಆರ್‌ಎಂ:361:2002–03 ರಂತೆ ವಾಹನವನ್ನು ತಾತ್ಕಾಲಿಕವಾಗಿ ಮಧ್ಯಂತರ ಬಿಡುಗಡೆಗೊಳಿಸಲಾಯಿತು.

ಸದರಿ ಪ್ರಕರಣದ ತನಿಖಾಧಿಕಾರಿಗಳಾದ ಅಬಕಾರಿ ಉಪ ನಿರೀಕ್ಷಕರು, ಉಪವಿಭಾಗ, ಮಡಿಕೇರಿ ಇವರು ತನಿಖೆಯನ್ನು ಪ್ರಾರಂಭಿಸಿ ಸದರಿ ವಶಪಡಿಸಿಕೊಂಡ ಮದ್ಯದಿಂದ ತೆಗೆದ ಮಾದರಿಯನ್ನು ಮಂಗಳೂರಿನ ರಾಸಾಯನಿಕ ಪರೀಕ್ಷಾ ಕೇಂದ್ರಕ್ಕೆ ಕಳಿಸಲಾಗಿದ್ದು, ರಾಸಾಯನಿಕ ವಿಶ್ಲೇಷಣಾ ವರದಿಯ ಪ್ರಕಾರ ಸದರಿ ಮದ್ಯವು ಮಾನವ ಸೇವನೆಗೆ ಯೋಗ್ಯವಿರುವುದಾಗಿ ದೃಢೀಕರಣ ಪತ್ರ ನೀಡಿ ತನಿಖೆಯನ್ನು ಮುಕ್ತಾಯಗೊಳಿಸಿ ಅಬಕಾರಿ ಉಪ ನಿರೀಕ್ಷಕರು, ಉಪವಿಭಾಗ, ಮಡಿಕೇರಿ ಇವರು ವರದಿ ಮ.ಉ.ವ.ಕ್ರೈಂ.ಸಂ:47/02–03, ದಿನಾಂಕ:24.03.2003ರ ಮೂಲಕ ವರದಿಯನ್ನು ಸಲ್ಲಿಸಿ ಸದರಿ ರಾಸಾಯನಿಕ ಪರೀಕ್ಷೆ ಹೊರತುಪಡಿಸಿ ಉಳಿದ 55.080 ಲೀಟರ್ ಮದ್ಯವನ್ನು ವಿಲೇವಾರಿ ಮಾಡಲು ಆದೇಶ ನೀಡಬೇಕಾಗಿ

ಕೋರಿಕೊಂಡ ಮೇರೆಗೆ ದಿನಾಂಕ:24.03.2003ರಂದು ಸದರಿ ಮದ್ಯವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ವಿಲೇವಾರಿ ಮಾಡಲು ಆದೇಶ ನೀಡಲಾಗಿರುತ್ತದೆ.

ಬ್ಯಾಂಕ್ ಗ್ಯಾರೆಂಟಿ ವಾಯಿದೆ ಅವಧಿ ದಿನಾಂಕ:27.02.2005ಕ್ಕೆ ಮುಕ್ತಾಯವಾಗುವುದರಿಂದ ಅವಧಿಯನ್ನು ವಿಸ್ತರಿಸಿ ಸಲ್ಲಿಸುವಂತೆ ದಿನಾಂಕ:10.02.2005ರಂದು ವಾಹನದ ಮಾಲೀಕರಿಗೂ, ಮ್ಯಾನೇಜರ್, ವಿಜಯಬ್ಯಾಂಕ್, ಗದ್ದೆಹಳ್ಳ ಶಾಖೆ, ಸುಂಟಿಕೊಪ್ಪ ಇವರಿಗೆ ಪತ್ರ ಬರೆಯಲಾಗಿತ್ತು. ಅಲ್ಲದೆ ಸದರಿ ಪತ್ರವನ್ನು ಅಬಕಾರಿ ನಿರೀಕ್ಷಕರು, ಮಡಿಕೇರಿ ವಲಯ ಇವರು ಖುದ್ದಾಗಿ ಜಾರಿ ಮಾಡುವಂತೆ ಸೂಚಿಸಲಾಗಿತ್ತು. ವಾಹನದ ಮಾಲೀಕರು ಬ್ಯಾಂಕ್ ಗ್ಯಾರೆಂಟಿ ವಾಯಿದೆಯನ್ನು ಕಾಲಕಾಲಕ್ಕೆ ಸರಿಯಾಗಿ ಅವಧಿಯನ್ನು ವಿಸ್ತರಿಸದೆ ಹಾಗೂ ವಿಚಾರಣೆಗೆ ಹಾಜರಾಗದೇ ವಾಹನದ ಮಧ್ಯಂತರ ಬಿಡುಗಡೆಯ ಸಮಯದಲ್ಲಿ ವಿಧಿಸಿದ ಷರತ್ತುಗಳನ್ನು ಉಲ್ಲಂಘನೆ ಮಾಡಿರುವುದು ಕಂಡುಬಂದ ಹಿನ್ನೆಲೆಯಲ್ಲಿ ಸದರಿ ಬ್ಯಾಂಕ್ ಗ್ಯಾರೆಂಟಿ ಹಣವನ್ನು ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಕೊಡಗು ಜಿಲ್ಲೆ, ಮಡಿಕೇರಿ ಇವರ ಹೆಸರಿಗೆ ಕಳುಹಿಸಿಕೊಡಲು ದಿನಾಂಕ:16.02.2005ರಂದು ಕೋರಿ ಮತ್ತೊಮ್ಮೆ ಪತ್ರ ಬರೆಯಲಾಗಿರುತ್ತದೆ. ಅದಕ್ಕೆ ಬ್ಯಾಂಕ್ ಮ್ಯಾನೇಜರ್‌ರವರು ಹಣವನ್ನು ಕಳುಹಿಸಿಕೊಡದ ಕಾರಣ, ದಿನಾಂಕ:27.02.2003ರಂದು ನೀಡಲಾದ ಬ್ಯಾಂಕ್ ಗ್ಯಾರಂಟಿ ಹಣವನ್ನು ಇನ್‌ವೋಕ್ ಮಾಡಿಕೊಳ್ಳಲಾಗಿರುತ್ತದೆ. ಅಲ್ಲದೆ ಸದರಿ ಹಣವನ್ನು ಡಿ.ಡಿ. ಮುಖಾಂತರ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ ರವರ ಹೆಸರಿಗೆ ಕಳುಹಿಸಿಕೊಡುವ ಬಗ್ಗೆ ಸದರಿ ಪತ್ರವನ್ನು ಬ್ಯಾಂಕ್ ಮ್ಯಾನೇಜರ್ ರವರಿಗೆ ನೋಂದಣಿ ಅಂಚೆ ಮುಖಾಂತರ ಕಳುಹಿಸಲಾಗಿರುವುದಲ್ಲದೆ ಖುದ್ದಾಗಿ ಜಾರಿ ಮಾಡಲು ಸಂಬಂಧಪಟ್ಟ ಮಡಿಕೇರಿ ವಲಯದ ಅಬಕಾರಿ ನಿರೀಕ್ಷಕರಿಗೆ ನಿರ್ದೇಶಿಸಲಾಗಿರುತ್ತದೆ. ಅದರಂತೆ ಅವರು ಜಾರಿ ಮಾಡಿ ಅವರಿಂದ ಸ್ವೀಕೃತಿಯನ್ನು ಪಡೆದ ಪತ್ರವನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ. ತದನಂತರ ಈ ಪತ್ರಕ್ಕೆ ಸಂಬಂಧಿಸಿದ ಬ್ಯಾಂಕಿನಿಂದ ಬ್ಯಾಂಕ್ ಗ್ಯಾರೆಂಟಿ ಸಂ:1/03, ದಿನಾಂಕ:27.02.2003ರ ಬಾಬ್ತು ರೂ.20,000 ಹಣವನ್ನು ಡಿ.ಡಿ. ಸಂ:340428 ಮೂಲಕ ಕಳುಹಿಸಿದ್ದು, ಈ ಪ್ರಾಧಿಕಾರಕ್ಕೆ ತಲುಪಿರುವ ಮೇರೆಗೆ ಸದರಿ ಹಣವನ್ನು ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ಕೊಡಗು ಜಿಲ್ಲೆ, ಮಡಿಕೇರಿ ರವರ ಹೆಸರಿನ ಖಾತೆ ಸಂ:10599751835 ರಲ್ಲಿ ಭದ್ರತೆಯಾಗಿ ಇರಿಸಲಾಗಿರುತ್ತದೆ.

ದಿನಾಂಕ:24.03.2005 ರಂದು ಪುರುಷೋತ್ತಮ, ಸುಳ್ಯರವರು ಅರ್ಜಿ ಸಲ್ಲಿಸಿರುವುದಲ್ಲದೆ ಬಳಕೆದಾರರ ಹಿತರಕ್ಷಣಾ ವೇದಿಕೆ, ಸುಳ್ಯ ರವರಿಂದಲೂ ಕೂಡ ಅರ್ಜಿಯನ್ನು ಸಲ್ಲಿಸಿ ಫಿರ್ಯಾದುದಾರರ ಠೇವಣಿಯನ್ನು ಹಿಂದಿರುಗಿಸಲು ಮತ್ತು ಪ್ರಕರಣವನ್ನು ತ್ವರಿತಗತಿಯಲ್ಲಿ ಇತ್ಯರ್ಥಗೊಳಿಸಲು ಪತ್ರದ ಮೂಲಕ ಕೋರಿರುತ್ತಾರೆ.

ದಿನಾಂಕ:07.01.2005ರಂದು ಪ್ರಕರಣದ ವಿಚಾರಣೆಗಾಗಿ ನೋಟೀಸ್ ನೀಡಲಾಗಿತ್ತು. ಸದರಿ ಪ್ರತಿಯನ್ನು ಶ್ರೀ ಪುರುಷೋತ್ತಮ ರವರ ಪರವಾಗಿ ದಿನಾಂಕ:24.03.2005ರಂದು ಅರ್ಜಿ ಸಲ್ಲಿಸಿರುವಂತಹ ಅಧ್ಯಕ್ಷರು, ಬಳಕೆದಾರರ ಹಿತರಕ್ಷಣಾ ವೇದಿಕೆ, ಶ್ರೀರಾಮಪೇಟೆ, ಸುಳ್ಯ, ದಕ್ಷಿಣ ಕನ್ನಡ ಜಿಲ್ಲೆ, ಇವರಿಗೂ ಕೂಡ ನೋಂದಾಣಿ ಅಂಚೆ ಮೂಲಕ ಕಳಿಸಲಾಗಿರುತ್ತದೆ. ಸದರಿ ದಿನಾಂಕದಂದು ಶ್ರೀ ಪುರುಷೋತ್ತಮ ರಾಗಲೀ ಅಥವಾ ಸಂಬಂಧಿಸಿದ ವೇದಿಕೆಯ ಅಧ್ಯಕ್ಷರಾಗಲೀ ಹಾಜರಾಗಿರುವುದಿಲ್ಲ. ದಿನಾಂಕ:06.05.2005ರಂದು ಮತ್ತೆ ವಿಚಾರಣೆಯನ್ನು ಈ ಪ್ರಾಧಿಕಾರದಲ್ಲಿ ನಿಗದಿಪಡಿಸಿ ಶ್ರೀ ಪುರುಷೋತ್ತಮ ರವರಿಗೆ ನೋಂದಾಣಿ ಅಂಚೆ ಮೂಲಕ ವಿಚಾರಣೆಗೆ ಹಾಜರಾಗುವಂತೆ ನೋಟೀಸ್ ನೀಡಲಾಗಿರುತ್ತದೆ. ಸದರಿಯವರಿಗೆ ಸ್ವೀಕೃತಿಯಾದ ಬಗ್ಗೆ ಸ್ವೀಕೃತಿ ಪತ್ರ ಬಂದಿರುತ್ತದೆ. ಆದರೆ ಸದರಿಯವರು ಹಾಜರಾಗಿರುವುದಿಲ್ಲ. ದಿನಾಂಕ:25.01.2007, 08.02.2007, 22.11.2008, 02.12.2008, 20.12.2008ರಂದು ವಿಚಾರಣೆಯನ್ನು ನಿಗದಿಪಡಿಸಿ ಪುರುಷೋತ್ತಮ ರವರು ನೀಡಿರುವ ವಿಳಾಸಕ್ಕೆ ನೋಂದಾಣಿ ಅಂಚೆ ಮತ್ತು ಸ್ವೀಕೃತಿ ಮೂಲಕ ಪತ್ರ ಕಳುಹಿಸಲಾಗಿದ್ದು, ಸದರಿಯವರು ಪತ್ರ ಪಡೆದುಕೊಂಡ ಬಗ್ಗೆ ಸ್ವೀಕೃತಿ ಬಂದಿರುತ್ತದೆ. ಆದರೂ ಕೂಡ ಪ್ರಾಧಿಕಾರದಲ್ಲಿ ನಡೆಯುವ ವಿಚಾರಣೆಗೆ ಅವರಾಗಲೀ ಅವರ ಪರ ವಕೀಲರಾಗಲಿ ಯಾರೂ ಹಾಜರಾಗಿರುವುದಿಲ್ಲ.

ಸದರಿ ವಾಹನದ ಮಾಲೀಕರು ಅಬಕಾರಿ ಅಕ್ರಮ ವ್ಯವಹಾರದಲ್ಲಿ ತೊಡಗಿರುವುದಲ್ಲದೇ ಸರ್ಕಾರಕ್ಕೆ ವಂಚನೆ ಮಾಡಿ ನಷ್ಟ ಉಂಟುಮಾಡುವ ಕೃತ್ಯದಲ್ಲಿ ಬಾಗಿಯಾಗಿರುವುದು ಹಾಗೂ ಶ್ರೀ ಪುರುಷೋತ್ತಮ ರವರು ವಾಹನವನ್ನು ಮಧ್ಯಂತರ ಬಿಡುಗಡೆಯ ಸಮಯದಲ್ಲಿ ವಿಧಿಸಲಾದ ಷರತ್ತುಗಳನ್ನು ಉಲ್ಲಂಘನೆ ಮಾಡಿರುವುದರಿಂದ ಸದರಿಯವರು ಕಾನೂನಿನ ಅರಿವಿದ್ದರೂ ಅಕ್ರಮ ಮದ್ಯ ಸಾಗಾಣಿಕೆಯಲ್ಲಿ ವಾಹನವನ್ನು ಉಪಯೋಗಿಸಿರುವುದು ಅವರ ಲಾಭಕ್ಕಾಗಿ ಮಾಡಿರುವಂತಹ ಕೃತ್ಯವಾಗಿರುವುದಾಗಿ ಈ ಪ್ರಾಧಿಕಾರವು ಅಭಿಪ್ರಾಯಕ್ಕೆ ಬಂದಿರುವುದರಿಂದ ಮತ್ತು ಆರ್.ಸಿ. ಮಾಲೀಕರು, ತಕ್ರೀರು ನಡೆಸಲು ಉತ್ಸುಕರಿಲ್ಲ ಎಂಬುದಾಗಿ ಪ್ರಾಧಿಕಾರದಲ್ಲಿ ತೀರ್ಮಾನ ತೆಗೆದುಕೊಳ್ಳಲಾಗಿರುತ್ತದೆ. ಪ್ರಕರಣದ ಸಂಬಂಧವಾಗಿ ಆರ್.ಸಿ. ಮಾಲೀಕರು ಸೂಕ್ತ ಸಾಕ್ಷ್ಯಾಧಾರಗಳನ್ನು ಹಾಜರುಪಡಿಸಲು ವಿಫಲರಾಗಿರುವುದರಿಂದ ಸರ್ಕಾರದ ಪರ ಸಾಕ್ಷಿಗಳ ವಿಚಾರಣೆಯನ್ನು ಕೈಬಿಟ್ಟು ವಶಪಡಿಸಿಕೊಳ್ಳಲಾಗಿದ್ದ ಸದರಿ ವಾಹನದ ಮೌಲ್ಯಕ್ಕೆ ಸಂಬಂಧಪಟ್ಟ ಬ್ಯಾಂಕ್ ಗ್ಯಾರೆಂಟಿ ಹಣ ರೂ.20,000 ಸಾವಿರವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ತೀರ್ಮಾನಿಸಲಾಯಿತು.

ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 43 ರಡಿಯಲ್ಲಿ ಪ್ರಕರಣಗಳನ್ನು ದಾಖಲು ಮಾಡುವಲ್ಲಿ ಆರೋಪಿಗಳು ಪತ್ತೆಯಾಗದಿದ್ದಲ್ಲಿ ಅಥವಾ ಪತ್ತೆಯಾಗುವ ಸಾಧ್ಯತೆಗಳು ಇಲ್ಲದಿದ್ದಲ್ಲಿ ಹಾಗೂ ಜಪ್ತು ಮಾಡಲಾದ ವಾಹನವನ್ನು ಜಪ್ತುಪಡಿಸಿದ

ಒಂದು ತಿಂಗಳೊಳಗೆ ಯಾವುದೇ ವ್ಯಕ್ತಿಯು ವಾಹನಕ್ಕೆ ಸಂಬಂಧಿಸಿದ ಕಾನೂನುಬದ್ಧವಾದ ದಾಖಲಾತಿಗಳೊಂದಿಗೆ ಮಾಲೀಕತ್ವವನ್ನು ಕೋರಿ ಪ್ರಾಧಿಕಾರದ ಮುಂದೆ ಬಾರದಿದ್ದಲ್ಲಿ ಹಾಗೂ ವಾಹನದ ಮಾಲೀಕನು ಸದರಿ ಪ್ರಕರಣಕ್ಕೆ ಸಂಬಂಧಿಸಿ ತಾನು ನಿರಾಪರಾಧಿ ಎಂಬುದನ್ನು ಸಾಕ್ಷ್ಯಾಧಾರದೊಂದಿಗೆ ಸೂಕ್ತ ದಾಖಲಾತಿಗಳನ್ನು ಪ್ರಾಧಿಕಾರಕ್ಕೆ ಸಲ್ಲಿಸಲು ವಿಫಲರಾದ ಪಕ್ಷದಲ್ಲಿ ಅಂತಹ ಸ್ವತ್ತುಗಳನ್ನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43ರಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾದಂತಹ ಸ್ವತ್ತುಗಳಾಗಿದ್ದಲ್ಲಿ ಈ ಪ್ರಾಧಿಕಾರವು ಅಕ್ರಮ ಮದ್ಯ ಸಾಗಾಣಿಕೆಗೆ ಒಳಪಡಿಸಿದ ಸ್ವತ್ತು/ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾಗಿದೆ. ಪ್ರಸ್ತುತ ಪ್ರಕರಣದಲ್ಲಿ ವಾಹನದ ಮಾಲೀಕರು ತಮ್ಮ ನಿರಾಪರಾಧಿತ್ವವನ್ನು ಸಾಬೀತುಪಡಿಸಲು ವಿಚಾರಣೆಗೆ ಹಾಜರಾಗಿರುವುದಿಲ್ಲ ಮತ್ತು ಈ ಬಗ್ಗೆ ಸಾಕ್ಷ್ಯಾಧಾರವನ್ನು ಒದಗಿಸುವಲ್ಲಿ ವಿಫಲರಾಗಿರುವುದು ದೃಢೀಕೃತವಾಗಿರುತ್ತದೆ. ಆದುದರಿಂದ ವಾಹನದ ಆರ್.ಸಿ. ಮಾಲೀಕರು ಅಬಕಾರಿ ಕಾಯಿದೆ ಕಾನೂನನ್ನು ಉಲ್ಲಂಘಿಸಿರುವ ಹಿನ್ನೆಲೆಯಲ್ಲಿ ವಾಹನ ಸಂಖ್ಯೆ: ಸಿಎನ್‌ಓ–1017 ನ್ನು ಮುಟ್ಟುಗೋಲು ಹಾಕಿಕೊಳ್ಳಬೇಕಾಗಿದ್ದು, ವಾಹನ ಮೌಲ್ಯಕ್ಕೆ ಸಮನಾದ ರೂ.20.000–(ಇಪ್ಪತ್ತು ಸಾವಿರ) ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಸೂಕ್ತವಾದ್ದರಿಂದ ಈ ಕೆಳಗಿನಂತೆ ಆದೇಶ.

**ಆದೇಶ**

ಈ ಮೇಲ್ಕಂಡಂತೆ ಪ್ರಕರಣದ ಮುಖ್ಯಾಂಶಗಳ ವಿವರಣೆಯ ಹಿನ್ನೆಲೆಯಲ್ಲಿ ಸಿ.ಎಲ್. ಜಯರಾಮ್, ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಉಪ ಆಯುಕ್ತರು, ಕೊಡಗು ಜಿಲ್ಲೆ, ಮಡಿಕೇರಿ ಆದ ನಾನು ಕರ್ನಾಟಕ ಅಬಕಾರಿ ಕಾಯಿದೆ, 1965ರ ಕಲಂ 43(ಎ)ನಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ಅಬಕಾರಿ ಉಪ ನಿರೀಕ್ಷಕರು, ಉಪವಿಭಾಗ, ಮಡಿಕೇರಿ ಇವರು ಮೊಕದ್ದಮೆ ಸಂಖ್ಯೆ:34/2002–03, ದಿನಾಂಕ:29.01.2003ರಂದು ಜಪ್ತುಪಡಿಸಲಾಗಿರುವ ಅಂಬಾಸಿಡರ್ ಕಾರ್ ಸಂಖ್ಯೆ: ಸಿಎನ್‌ಓ–1017ರ ವಾಹನವನ್ನು ಕರ್ನಾಟಕ ರಾಜ್ಯ ಅಬಕಾರಿ ಕಾಯಿದೆ ಕಲಂ 43ಸಿ ರನ್ವಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಆದೇಶ ಇಂದು ಅಂದರೆ ದಿನಾಂಕ:23.12.2008ರಂದು ಬೆರಳಚ್ಚು ಮಾಡಿ ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

**ಸಿ.ಎಲ್. ಜಯರಾಂ**

ಪಿ.ಆರ್.65

ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್
ಆಫ್ ಎಕ್ಸೈಜ್, ಕೊಡಗು ಜಿಲ್ಲೆ, ಮಡಿಕೇರಿ.

**ಲೋಕೋಪಯೋಗಿ ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ**

**ಕಾರ್ಯಪಾಲಕ ಅಭಿಯಂತರರವರ ಕಛೇರಿ, ಶಿವಮೊಗ್ಗ ವಿಭಾಗ ಶಿವಮೊಗ್ಗ**

**ಸುತ್ತೋಲೆ ಸಂಖ್ಯೆ: ಕಾಅ:ಲೋಇ:ಸಿಬ್ಬಂದಿ–4 ಮಾಹಿತಿ ಹಕ್ಕು 2005:2009–10 368 ದಿನಾಂಕ:26ನೇ ಮೇ, 2009**

ಸರ್ಕಾರದ ಅಧಿಸೂಚನೆ ಸಂಖ್ಯೆ.ಲೋಇ:64:ಸ್ವೀಮರ:05:ದಿನಾಂಕ:23–09–2005 ಹಾಗೂ ಲೋಇ.16: ಐಟಿಸಿ:08: 2750 ದಿನಾಂಕ:25–02–08 ಮತ್ತು ಮುಖ್ಯ ಇಂಜಿನಿಯರ್, ಸಂಕದ ಬೆಂಗಳೂರು ಇವರ ಅಧಿಸೂಚನೆ ಸಂಖ್ಯೆ. ಸಿಬಿಎಸ್: ಮಾಹಿತಿಹಕ್ಕು:ಕೈಪಿಡಿ:2005:ಇಎಸ್‌ಎಫ್:05–06 ದಿನಾಂಕ:19–09–2005 ಹಾಗೂ ಮುಖ್ಯ ಇಂಜಿನಿಯರ್ ಸಿಬಿಎಸ್:ಮಹಕಾ: 208:07–08: ದಿನಾಂಕ:20–03–2008ರ ಪರಿಷ್ಕೃತ ನಿರ್ದೇಶನದಂತೆ 2005ರ ಮಾಹಿತಿಹಕ್ಕು ಅಧಿನಿಯಮ–2ರ ಅಡಿಯಲ್ಲಿ ಲೋ.ಇ. ಮುಖ್ಯಸ್ಥರನ್ನು ಸಾರ್ವಜನಿಕ ಪ್ರಾಧಿಕಾರಿ ಎಂದು ನಾಮಾಂಕಿತ ಮಾಡಿ ಸರ್ಕಾರವು ನೇಮಿಸಿದೆ.

ಮಾಹಿತಿ ಹಕ್ಕು ಅಧಿನಿಯಮ 2005ರ ಸೆಕ್ಷನ್ 5(2)ರ ಅಡಿಯಲ್ಲಿ ಇಲಾಖಾ ಮುಖ್ಯಸ್ಥರ ಅಧೀನದಲ್ಲಿ ಕಾರ್ಯ ನಿರ್ವಹಿಸುತ್ತಿರುವ ಕ್ಷೇತ್ರ ಕಛೇರಿಗಳಲ್ಲಿನ ಕಾರ್ಯ ವಿಧಾನದ ಬಗ್ಗೆ ಸಾರ್ವಜನಿಕರಿಗೆ ಮಾಹಿತಿ ನೀಡಲು ಇಲಾಖಾ ಮುಖ್ಯಸ್ಥರು ಎಲ್ಲಾ ಸಹಾಯಕ ಕಾರ್ಯಪಾಲಕ ಇಂಜಿನಿಯರ್‌ಗಳನ್ನು ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ ಎಂದು ಮತ್ತು ಸದರಿ ನಿಯಮ 5(1)ರ ಅಡಿಯಲ್ಲಿ ಕಾರ್ಯಪಾಲಕ ಇಂಜಿನಿಯರ್‌ಗಳನ್ನು ಸಾರ್ವಜನಿಕ ಮಾಹಿತಿ ಅಧಿಕಾರಿ ಎಂದೂ ನೇಮಕ ಮಾಡಿರುತ್ತಾರೆ.

ಈ ಸಂಬಂಧ ಶಿವಮೊಗ್ಗ ಲೋ.ಇ ವಿಭಾಗದ ವ್ಯಾಪ್ತಿಗೆ ಸಂಬಂಧಿಸಿದಂತೆ ವಿಭಾಗ ಕಛೇರಿಯ ತಾಂತ್ರಿಕ ಸಹಾಯಕರನ್ನು ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ (ಎ.ಪಿ.ಐ.ಓ.) ಎಂದು ಕಾರ್ಯಪಾಲಕ ಇಂಜಿನಿಯರ್ ಇವರನ್ನು ವಿಶೇಷ ಸಾರ್ವಜನಿಕ ಮಾಹಿತಿ ಅಧಿಕಾರಿ (ಎಸ್.ಪಿ.ಐ.ಓ.) ಎಂದು ಈ ಮೂಲಕ ನಾಮಾಂಕಿತ ಮಾಡಲಾಗಿದೆ. ಈ ಬಗ್ಗೆ ಈ ಕಛೇರಿಯಿಂದ ಮಾಹಿತಿಹಕ್ಕು ಕೈಪಿಡಿ–2005 ನ್ನು ಪ್ರಕಟಿಸಿದ್ದು ಅಧೀನ ಕಛೇರಿಗಳಾದ ಸಹಾಯಕ ಕಾರ್ಯಪಾಲಕ ಇಂಜಿನಿಯರ್‌ರವರ ಕಛೇರಿಗಳಲ್ಲಿ ಇದೇ ರೀತಿಯಲ್ಲಿ ತಮ್ಮ ಕಛೇರಿಗೆ ಸಂಬಂಧಿಸಿದಂತೆ ಮಾಹಿತಿಹಕ್ಕು ಕೈಪಿಡಿ 2005ನ್ನು ಪ್ರಕಟಿಸಿ ವೆಬ್‌ಸೈಟ್‌ನಲ್ಲಿ ಪ್ರಚುರ ಪಡಿಸುವಂತೆ ಡಿಪಿಸಿ / ಎನ್‌ಪಿಸಿ ಇವರಿಗೆ ತಿಳಿಸಲು ಸೂಚಿಸಿದೆ. ಶಿವಮೊಗ್ಗ ಲೋ.ಇ. ವಿಭಾಗ ಕಛೇರಿಯ ಮಾಹಿತಿಯನ್ನು ಈ ಮೂಲಕ ಪರಿಷ್ಕರಿಸಿ ಪ್ರಕಟಿಸಿದೆ.

**ಜಿ.ಆರ್. ಚಂದ್ರಶೇಖರಪ್ಪ**

ಕಾರ್ಯಪಾಲಕ ಅಭಿಯಂತರು,
ಲೋ ಬಂ ಮತ್ತು ಒ ಜ ಸಾ ಇಲಾಖೆ,
ಶಿವಮೊಗ್ಗ ವಿಭಾಗ, ಶಿವಮೊಗ್ಗ

**ನಮೂನೆ**

**ಮಾಹಿತಿಹಕ್ಕು ಅಧಿನಿಯಮ 2005**

**ಕಾರ್ಯಪಾಲಕ ಇಂಜಿನಿಯರ್ ಲೋ ಬಂ ಮತ್ತು ಒ ಜ ಸಾ ಇಲಾಖೆ ಶಿವಮೊಗ್ಗ ವಿಭಾಗ, ಶಿವಮೊಗ್ಗ**

ಮಾಹಿತಿಹಕ್ಕು ಅಧಿನಿಯಮ 2005 ಸೆಕ್ಷನ್ 5(1)(2)ರ ಅಡಿಯಲ್ಲಿ ಈ ಕಛೇರಿಯಿಂದ ನೇಮಿಸಲಾದ ಅಧಿಕಾರಿಗಳು ಸಾರ್ವಜನಿಕ ಸಂಪರ್ಕ ಅಧಿಕಾರಿಗಳಾಗಿರುತ್ತಾರೆ.

**ಈ ಕಛೇರಿಯಲ್ಲಿ ಮಾಹಿತಿ ದಾಖಲೆಗಳನ್ನು ನೀಡುವ ಅಧಿಕಾರಿಗಳು ಸಾರ್ವಜನಿಕ ಮಾಹಿತಿ ಅಧಿಕಾರಿ ಸೆಕ್ಷನ್ 5(1)ರ ಪ್ರಕಾರ**

| **ಅಧಿಕಾರಿ ಹೆಸರು** | **ಪದನಾಮ** |
|---|---|
| ಶ್ರೀ ಜಿ.ಅರ್. ಚಂದ್ರಶೇಖರಪ್ಪ | ಕಾರ್ಯಪಾಲಕ ಇಂಜಿನಿಯರ್,<br>ಲೋ ಬಂ ಮತ್ತು ಒ ಜ ಸಾ ಇಲಾಖೆ<br>ಶಿವಮೊಗ್ಗ ವಿಭಾಗ, ಶಿವಮೊಗ್ಗ,<br>ದೂರವಾಣಿ ಸಂಖ್ಯೆ.08182-274942 |

**ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ ಸೆಕ್ಷನ್ 5(2)ರ ಪ್ರಕಾರ**

| **ಅಧಿಕಾರಿ ಹೆಸರು** | **ಪದನಾಮ** |
|---|---|
| ಶ್ರೀ ಡಿ.ಎಸ್. ನಾಗರಾಜ್ | ತಾಂತ್ರಿಕ ಸಹಾಯಕರು,<br>ಕಾರ್ಯಪಾಲಕ ಇಂಜಿನಿಯರ್‌ರವರ ಕಛೇರಿ,<br>ಲೋ ಬಂ ಮತ್ತು ಒ ಜ ಸಾ ಇಲಾಖೆ<br>ಶಿವಮೊಗ್ಗ ವಿಭಾಗ, ಶಿವಮೊಗ್ಗ,<br>ದೂರವಾಣಿ ಸಂಖ್ಯೆ.08182-274942 |

ಮೇಲಿನ ಅಧಿಕಾರಿಗಳು ಮಾಹಿತಿಯನ್ನು 30 ದಿನಗಳೊಳಗಾಗಿ ನೀಡದಿದ್ದಲ್ಲಿ ಅಥವಾ ಸಹಕರಿಸದಿದ್ದಲ್ಲಿ ದೂರನ್ನು ಮತ್ತು ಮೇಲ್ಮನವಿಯನ್ನು ಸೆಕ್ಷನ್ 19(1)ರ ಪ್ರಕಾರ ಈ ಕೆಳಕಂಡ ಅಧಿಕಾರಿಗಳಿಗೆ ನೀಡಬಹುದು.

ಅಧೀಕ್ಷಕ ಅಭಿಯಂತರು, ಲೋ ಬಂ ಮತ್ತು ಒ ಜ ಸಾ ಇಲಾಖೆ, ಶಿವಮೊಗ್ಗ ವೃತ್ತ, ಶಿವಮೊಗ್ಗ

**ಕರ್ತವ್ಯದ ಹಾಜರಾತಿ**

ಮಾಹಿತಿ ಪಡೆಯುವ ಹಕ್ಕು ಅಧಿನಿಯಮ - 2005ರ ಸೆಕ್ಷನ್ 5(1)ರ ಪ್ರಕಾರ ಶ್ರೀ ಜಿ.ಆರ್ ಚಂದ್ರಶೇಖರಪ್ಪ ಕಾರ್ಯಪಾಲಕ ಇಂಜಿನಿಯರ್, ಆದ ನಾನು ವಿಶೇಷ ಸಾರ್ವಜನಿಕ ಮಾಹಿತಿ ಅಧಿಕಾರಿ (ಎಸ್.ಪಿ.ಐ.ಓ)ಯಾಗಿ ಕರ್ತವ್ಯ ನಿರ್ವಹಿಸಲು ದಿನಾಂಕ: 30-08-2007 ರಂದು ಹೊಣೆಗಾರಿಕೆಯನ್ನು ಒಪ್ಪಿಕೊಂಡಿರುತ್ತೇನೆ.

**ಸಹಿ:**

**ಪದನಾಮ:** ಕಾರ್ಯಪಾಲಕ ಇಂಜಿನಿಯರ್,
ಲೋ ಬಂ ಮತ್ತು ಒ ಜ ಸಾ ಇಲಾಖೆ,
ಶಿವಮೊಗ್ಗ ವಿಭಾಗ, ಶಿವಮೊಗ್ಗ.

**ಕರ್ತವ್ಯದ ಹಾಜರಾತಿ**

ಮಾಹಿತಿ ಪಡೆಯುವ ಹಕ್ಕು ಅಧಿನಿಯಮ - 2005ರ ಸೆಕ್ಷನ್ 5(2) ರ ಪ್ರಕಾರ ಶ್ರೀ ಡಿ.ಎಸ್. ನಾಗರಾಜ್, ತಾಂತ್ರಿಕ ಸಹಾಯಕರು, ಆದ ನಾನು ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ (ಎ.ಪಿ.ಐ.ಓ)ಯಾಗಿ ಕರ್ತವ್ಯ ನಿರ್ವಹಿಸಲು ದಿನಾಂಕ: 17-11-2008 ರಂದು ಹೊಣೆಗಾರಿಕೆಯನ್ನು ಒಪ್ಪಿಕೊಂಡಿರುತ್ತೇನೆ.

**ಸಹಿ:**

**ಪದನಾಮ:** ತಾಂತ್ರಿಕ ಸಹಾಯಕರು,
ಕಾರ್ಯಪಾಲಕ ಇಂಜಿನಿಯರ್‌ರವರ ಕಛೇರಿ,
ಲೋ ಬಂ ಮತ್ತು ಒ ಜ ಸಾ ಇಲಾಖೆ,
ಶಿವಮೊಗ್ಗ ವಿಭಾಗ, ಶಿವಮೊಗ್ಗ.

**ಸುವರ್ಣ ಕರ್ನಾಟಕ - 2005**

**ಕರ್ನಾಟಕ ಸರ್ಕಾರ**

**(ಲೋಕೋಪಯೋಗಿ ಇಲಾಖೆ)**

**ಮಾಹಿತಿ ಹಕ್ಕು ಕೈಪಿಡಿ 2005 ಸೆಕ್ಷನ್ 4(1) (ಬಿ) ಅನ್ವಯ**

**ಕಾರ್ಯಪಾಲಕ ಇಂಜಿನಿಯರ್,**

**ಲೋಕೋಪಯೋಗಿ ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ,**

**ಶಿವಮೊಗ್ಗ ವಿಭಾಗ,ಶಿವಮೊಗ್ಗ**

**ಸುವರ್ಣ ಕರ್ನಾಟಕ - 2005**

**ಕರ್ನಾಟಕ ಸರ್ಕಾರ**

**ಲೋಕೋಪಯೋಗಿ ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ,**

**ಶಿವಮೊಗ್ಗ ವಿಭಾಗ, ಶಿವಮೊಗ್ಗ.**

**ಮಾಹಿತಿ ಹಕ್ಕು ಕೈಪಿಡಿ - 2005 ಸೆಕ್ಷನ್ 4(1) (ಬಿ) ಅನ್ವಯ**

**1. ಸಂಸ್ಥೆಯ ಬಗ್ಗೆ ವಿವರಗಳು, ಕಾರ್ಯಗಳು ಮತ್ತು ಕರ್ತವ್ಯಗಳು:-**

**ಅ) ಸಂಸ್ಥೆಯ ಹೆಸರು:** ಲೋಕೋಪಯೋಗಿ ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ ಶಿವಮೊಗ್ಗ ವಿಭಾಗ ಶಿವಮೊಗ್ಗ ಹಾಗೂ ರಾಜ್ಯ ಹೆದ್ದಾರಿ ಪ್ರಾಧಿಕಾರ, ಶಿವಮೊಗ್ಗ.

**ಆ) ರಚನೆ:**

**ಕಾರ್ಯಪಾಲಕ ಇಂಜಿನಿಯರ್**

↓

| **ತಾಂತ್ರಿಕ ಶಾಖೆ** | **ಆಡಳಿತ ಶಾಖೆ** | **ಲೆಕ್ಕ ಪತ್ರ ಶಾಖೆ** | **ಉಗ್ರಾಣ ಶಾಖೆ** |
|---|---|---|---|
| ತಾಂತ್ರಿಕ ಸಹಾಯಕರು-1 | ಅಧೀಕ್ಷಕರು-1 | ಲೆಕ್ಕ ಪರಿಶೋಧನಾಧಿಕಾರಿ-1 | ದ್ವಿತೀಯ ದರ್ಜೆ ಉಗ್ರಾಣ ಪಾಲಕರು-1 |
| ಸಹಾಯಕ ಇಂಜಿನಿಯರ್-2 | ಪ್ರ.ದ.ಸಹಾಯಕರು-1 | ಪ್ರ.ದ.ಲೆ.ಸಹಾಯಕರು-3 | |
| ಕಿರಿಯ ಇಂಜಿನಿಯರ್-3 | ದ್ವಿ.ದ.ಸಹಾಯಕರು-4 | ದ್ವಿ.ದ.ಲೆ.ಸಹಾಯಕರು-1 | |
| ಸಾಂಖ್ಯಿಕ ನಿರೀಕ್ಷಕರು-1 | ಶೀಘ್ರಲಿಪಿಗಾರರು-1 | | |
| ಪ್ರ.ದ.ಭೂ.ಮಾಪಕರು-1 | ಬೆರಳಚ್ಚುಗಾರರು-2 | | |
| | ಚಾಲಕ-1 | | |
| | ಡಿ ದರ್ಜೆ ನೌಕರರು-2 | | |

**ನಿಯೋಜನೆಯ ಮೇಲೆ ಇರುವ ನೌಕರರು:**

1) ಶ್ರೀಮತಿ ಜರೀನಾ ಬೇಗಂ ಉರುಫ್ ಜಯಂತಿ, ದ್ವಿ.ದ.ಸಹಾಯಕರು (ಮಂಗಳೂರು ಲೋಇ ಉಪವಿಭಾಗದಿಂದ)
2) ಶ್ರೀ ಎ.ಎಂ. ಲೋಕೇಶ್‌ರಾವ್, ಕ್ಲೀನರ್. (ನಂ.1 ಲೋಇ ಉಪವಿಭಾಗ ಶಿವಮೊಗ್ಗದಿಂದ)
3) ಶ್ರೀ ಗಂಗಯ್ಯ ಜವಾನರು. (ನಂ.3 ಲೋಇ ಉಪವಿಭಾಗ, ಭದ್ರಾವತಿ)
4) ಶ್ರೀ ಎಂ. ಶ್ರೀನಿವಾಸ್, ವಾಟರ್‌ಬಾಯ್. (ನಂ.5 ಲೋಇ ಉಪವಿಭಾಗ,ಸಾಗರ)

**ಇ) ಕಾರ್ಯಗಳು ಮತ್ತು ಕರ್ತವ್ಯಗಳು**

ಲೋಕೋಪಯೋಗಿ ಇಲಾಖೆಯ ಶಿವಮೊಗ್ಗ ವಿಭಾಗದ ವ್ಯಾಪ್ತಿಯಲ್ಲಿ ಬರುವ ರಸ್ತೆಗಳು, ಕಟ್ಟಡಗಳು ಹಾಗೂ ಸಾರ್ವಜನಿಕ ಆಸ್ತಿ-ಪಾಸ್ತಿಗಳಿಗೆ ಸಂಬಂಧಿಸಿದ ಆಡಳಿತಾತ್ಮಕ, ಆರ್ಥಿಕ ಹಾಗೂ ಸೇವೆಗಳಿಗೆ ಸಂಬಂಧಿಸಿದ ಕೆಲಸ-ಕಾರ್ಯಗಳನ್ನು ನಿರ್ವಹಿಸಲಾಗುತ್ತದೆ. ಹಾಗೂ ಶಿವಮೊಗ್ಗ ವಿಭಾಗಕ್ಕೆ ಸಂಬಂಧಿಸಿದಂತೆ ಸಹಾಯಕ ಕಾರ್ಯಪಾಲಕ ಇಂಜಿನಿಯರ್ ಲೋಇ ಉಪವಿಭಾಗ ಸಾಗರ:ಶಿಕಾರಿಪುರ: ಸೊರಬ: ವಿಶೇಷ ಉಪವಿಭಾಗ ಶಿಕಾರಿಪುರ ಮತ್ತು ಹೊಸನಗರಗಳನ್ನು ಒಳಗೊಂಡಿರುತ್ತದೆ.

**11. ಅಧಿಕಾರಿಗಳು ಮತ್ತು ಸಿಬ್ಬಂದಿ : ಅಧಿಕಾರ ಮತ್ತು ಕರ್ತವ್ಯಗಳು**

1) ಕಾರ್ಯಪಾಲಕ ಅಭಿಯಂತರರು:- ಶಿವಮೊಗ್ಗ ವಿಭಾಗಧ ಅಧಿಕೃತ ಮುಖ್ಯಸ್ಥರಾಗಿದ್ದು ಸರ್ಕಾರಿ ನಿಯಮಗಳ ಚೌಕಟ್ಟಿನಲ್ಲಿ ಹಾಗೂ ಕರ್ನಾಟಕ ಸರ್ಕಾರಿ (ವ್ಯವಹಾರ ನಿರ್ವಹಣೆ) ನಿಯಮಾವಳಿಗಳಿಗೆ ಒಳಪಟ್ಟು ಪ್ರಕರಣಗಳ ವಿಲೇವಾರಿ ಮತ್ತು ಎಲ್ಲಾ ವ್ಯವಹಾರದ ಜವಾಬ್ದಾರಿ ಹೊಂದಿರುತ್ತಾರೆ ಹಾಗೂ ಅಧೀನ ಸಿಬ್ಬಂದಿಯ ಮೇಲ್ವಿಚಾರಣೆ ಮತ್ತು ನಿಯಂತ್ರಣ ಅಧಿಕಾರ ಹೊಂದಿರುತ್ತಾರೆ .
2) ತಾಂತ್ರಿಕ ಸಹಾಯಕರು:- ತಾಂತ್ರಿಕ ಶಾಖೆಯ ಸಂಪೂರ್ಣ ಉಸ್ತುವಾರಿ ಹಾಗೂ ವಿಷಯ ನಿರ್ವಾಹಕರು ಮಂಡಿಸಲಾದ ಪ್ರತಿಯೊಂದು ತಾಂತ್ರಿಕ ವಿಚಾರಗಳ ಪತ್ರ ಹಾಗೂ ಕಡತಗಳಿಗೆ ಸೂಕ್ತ ಮಾರ್ಗದರ್ಶನ ನೀಡಿ ಮುಂದಿನ ಆದೇಶಕ್ಕಾಗಿ ಕಾರ್ಯಪಾಲಕ ಅಭಿಯಂತರವರಿಗೆ ಇವರಿಂದ ಮಂಡಿಸಲಾಗುತ್ತದೆ. ಹಾಗೂ ಕಾರ್ಯಪಾಲಕ ಇಂಜಿನಿಯರ್‌ರವರಿಗೆ ಸಲಹೆ ಸಹಕಾರ ನೀಡುವರು.

3) ಸಹಾಯಕ ಅಭಿಯಂತರರು–1:– ಸೊರಬ ಮತ್ತು ಶಿಕಾರಿಪುರ ತಾಲ್ಲೂಕಿಗೆ ಸಂಬಂಧಿಸಿದಂತೆ ಲೆಕ್ಕಶೀರ್ಷಿಕೆ 3054,2216,2059ರಲ್ಲಿ ಅಂದಾಜುಪಟ್ಟಿಗಳ ಪರಿಶೀಲನೆ ಹಾಗೂ ಮಂಜೂರಾತಿ ಕಾಮಗಾರಿ ಆದೇಶ ನೀಡುವ ಬಗ್ಗೆ ಕಾರ್ಯನಿರ್ವಹಿಸುವರು ನೆರೆಹಾವಳಿ ವಿಷಯಗಳ ಪತ್ರ ವ್ಯವಹಾರ

4) ಸಹಾಯಕ ಅಭಿಯಂತರರು–2:– ಸಾಗರ ಲೋಇ ಉಪವಿಭಾಗಗಳಿಗೆ ಸಂಬಂಧಿಸಿದಂತೆ ಕೇಂದ್ರ ರಸ್ತೆನಿಧಿಯ ಕಾಮಗಾರಿಗಳ ನಿರ್ವಹಣೆ ಲೆಕ್ಕಶೀರ್ಷಿಕೆ 3054,2216,2059 ಯೋಜನೆ ಹಾಗೂ ಇತರೆ ಕಟ್ಟಡಗಳಿಗೆ ಸಂಬಂಧಿಸಿದಂತೆ ಅಂದಾಜುಪಟ್ಟಿಗಳ ಪರಿಶೀಲನೆ ಹಾಗೂ ಮಂಜೂರಾತಿಯ ಕಾಮಗಾರಿ ಆದೇಶ ನೀಡುವ ಬಗ್ಗೆ ಕಾರ್ಯನಿರ್ವಹಿಸುವರು. ರಾಜ್ಯಹೆದ್ದಾರಿ ಪ್ರಾಧಿಕಾರದ ಕಾಮಗಾರಿ ನಿರ್ವಹಣೆ (ಕೆ ಆರ್ ಡಿ ಸಿ ಎಲ್)ಪರಿಶೀಲಿಸಿ ತಾಂತ್ರಿಕ ಸಹಾಯಕರ ಮೂಲಕ ಕಾರ್ಯಪಾಲಕ ಇಂಜಿನಿಯರ್‌ರವರಿಗೆ ಅನುಮೋದನೆಗಾಗಿ ಮಂಡಿಸುವುದು.

5) ಕಿರಿಯ ಅಭಿಯಂತರರು–3:– ಶಿವಮೊಗ್ಗ ವಿಭಾಗದಲ್ಲಿ ಬರುವ ಕೆಲವು ತಾಲ್ಲೂಕುಗಳ ಕಾಮಗಾರಿಗಳ ಅಂದಾಜುಪಟ್ಟಿ ಅನುಮೋದನೆ ಬಗ್ಗೆ ಹಾಗೂ ತಾಂತ್ರಿಕ ಸಹಾಯಕರ ಮೂಲಕ ಕಾರ್ಯಪಾಲಕ ಇಂಜಿನಿಯರ್‌ರವರಿಗೆ ಕಡತ ಮಂಡಿಸುವುದು.

6) **ಸಾಂಖ್ಯಿಕ ನಿರೀಕ್ಷಕರು–1:–** ರಸ್ತೆ, ಸೇತುವೆ ಹಾಗೂ ಕಟ್ಟಡಗಳಿಗೆ ಸಂಬಂಧಿಸಿದಂತೆ ಅಂಕಿ–ಸಂಖ್ಯಾ ಮಾಹಿತಿ ಸಲ್ಲಿಸುವುದು. ವಾರ್ಷಿಕ ರಸ್ತೆ ಸಂಚಾರ ಸಮೀಕ್ಷೆ: ಗಣತಿ ಕ್ರೂಢೀಕರಣದ ವರದಿ ಸಲ್ಲಿಸುವುದು. ಕಟ್ಟಡ ವಹಿ ರಸ್ತೆ ಬಾರ್‌ಚಾರ್ಟ್, ಸ್ಥಿರ ಆಸ್ತಿ ವಹಿಗಳಿಗೆ ಖಾಲಿ ಜಮೀನು ವಹಿಗಳ ನಿರ್ವಹಣೆ, ತಪಾಸಣಾ ವರದಿಗಳ ಸಂಗ್ರಹಣೆ ಮೇಲಾಧಿಕಾರಿಗಳಿಗೆ ಸಲ್ಲಿಕೆ.

7) **ಪ್ರಥಮ ದರ್ಜೆ ಭೂ–ಮಾಪಕರು–1:–** ರಾಜ್ಯಹೆದ್ದಾರಿ ಮತ್ತು ಜಿಲ್ಲಾ ಮುಖ್ಯ ರಸ್ತೆಗಳ ಅತಿಕ್ರಮಣದ ಬಗ್ಗೆ ನ್ಯಾಯಾಲಯದ ಪ್ರಕರಣಗಳ ವಿಲೇವಾರಿ, ರಾಜ್ಯಹೆದ್ದಾರಿ , ಜಿಲ್ಲಾ ಮುಖ್ಯ ರಸ್ತೆಯ ಅಗಲೀಕರಣದ ಭೂ–ಸ್ವಾಧೀನ ಪಡಿಸಿಕೊಳ್ಳುವ ಬಗ್ಗೆ 1964ರ ಕಾಯಿದೆ ಪ್ರಕಾರ ರಾಜ್ಯ ಹಾಗೂ ಜಿಲ್ಲಾ ಮುಖ್ಯ ರಸ್ತೆಯ ಅಗಲೀಕರಣದ ಭೂ ಸ್ವಾಧೀನಪಡಿಸಿಕೊಳ್ಳುವ ಬಗ್ಗೆ 1964ರ ಕಾಯಿದೆ ಪ್ರಕಾರ ರಾಜ್ಯ ಹಾಗೂ ಜಿಲ್ಲಾ ಮುಖ್ಯ ರಸ್ತೆಗಳ ಘೋಷ್ವಾರೆ ಬಗ್ಗೆ ರಾಜ್ಯದ ಗೆಜೆಟ್‌ನಲ್ಲಿ ಪ್ರಕಟಿಸುವುದು. ರಸ್ತೆಗಳ ಅತಿಕ್ರಮಣ ತೆರವುಗೊಳಿಸುವ ಬಗ್ಗೆ ಪತ್ರ ವ್ಯವಹಾರದ ಕಾರ್ಯನಿರ್ವಹಿಸುವುದು.

8) **ಅಧೀಕ್ಷಕರು :–** ಆಡಳಿತ ಶಾಖೆಗೆ ಸಂಬಂಧಿಸಿದಂತೆ, ಎಲ್ಲಾ ಪತ್ರ ಕಡತಗಳನ್ನು ನಿರ್ವಹಿಸುವುದು ಕಛೇರಿಯ ಎಲ್ಲಾ ಶಾಖೆ ನೌಕರರುಗಳ ಚಲನವಲನವನ್ನು ಪರಿಶೀಲಿಸುವುದು ರಹಸ್ಯ ವರದಿಗಳು ಹಾಗೂ ಆಸ್ತಿ ಹೊಣೆಗಾರಿಕೆಯ ಪಟ್ಟಿಗಳನ್ನು ನಿರ್ವಹಿಸುವುದು. ಕಡತಗಳನ್ನು ವಿಷಯ ನಿರ್ವಾಹಕರಿಂದ ಸಕಾಲದಲ್ಲಿ ವಿಲೇವಾರಿಯಾಗುವಂತೆ ಸಹಕರಿಸಿ ಮೇಲ್ವಿಚಾರಣೆ ಮಾಡುವರು ಕಾರ್ಯಪಾಲಕ ಇಂಜಿನಿಯರ್‌ರವರ ಅನುಮೋದನೆಗೆ ಕಡತಗಳನ್ನು ಸಕಾಲದಲ್ಲಿ ಸಲ್ಲಿಸಲು ಕ್ರಮ ಕೈಗೊಳ್ಳುವುದು.

9) **ಪ್ರಥಮ ದರ್ಜೆ ಸಹಾಯಕರು** –1:– (ಸಿಬ್ಬಂದಿ–1) ಕಛೇರಿಯ ಎಲ್ಲಾ ಅಧಿಕಾರಿ: ಸಿಬ್ಬಂದಿ ವರ್ಗದವರ ಸಂಬಳದ ಬಿಲ್ಲು ತಯಾರಿಸುವುದು. ಸೇವಾ ವಹಿಗಳ ನಿರ್ವಹಣೆ, ಪತ್ರ ವ್ಯವಹಾರ ತಪಾಸಣಾ ವರಧಿಗಳ ನಿರ್ವಹಣೆ, ವಿಭಾಗ ಹಾಗೂ ಉಪವಿಭಾಗ ನೌಕರರ ಹಾಗೂ ಅಧಿಕಾರಿಗಳ ಸಾಂದರ್ಭಿಕ ರಜೆ ಕಡತ ನಿರ್ವಹಣೆ, ಬಜೆಟ್ ತಯಾರಿಕೆ , ಅನ್ಯ ಸೇವಾ ನೌಕರರ ಸೇವಾ ನಿರ್ವಹಣೆ.

10) **ದ್ವಿತೀಯ ದರ್ಜೆ ಸಹಾಯಕರು–** 1(ಸಿ–2):– 4ನೇ ದರ್ಜೆ ಗುತ್ತಿಗೆದಾರರ ನೊಂದಣೆ ಇಲಾಖಾ ವಿಚಾರಣೆಗಳು, ನಿಯತಕಾಲಿಕೆಗಳು, ಎಇಇಗಳ ಪತ್ರವ್ಯವಹಾರ ಇತ್ಯಾದಿ ನಿರ್ವಹಣೆ, ಕಾರ್ಮಿಕ ನ್ಯಾಯಾಲಯ ಪ್ರಕರಣಗಳು ಡಿ ಗ್ರೂಪ್ ನೌಕರರ ಪತ್ರ ವ್ಯವಹಾರ ಮತ್ತು ಸಿಬ್ಬಂದಿ ಖರ್ಚು ವೆಚ್ಚದ ತಃಖ್ತೆಯನ್ನು ತಯಾರಿಸುವುದು.

11) **ದ್ವಿತೀಯ ದರ್ಜೆ ಸಹಾಯಕರು–** 2(ಸಿ–3):– ಕಿರಿಯ ಇಂಜಿನಿಯರ್ ಹೊರತುಪಡಿಸಿ ಎಲ್ಲಾ ಸಿ ಗುಂಪಿನ ನೌಕರರ ಪತ್ರ ವ್ಯವಹಾರ, ವೈದ್ಯಕೀಯ ಮರುಪಾವತಿ ಬಿಲ್ಲುಗಳ ಮೇಲುಸಹಿ ನಿರ್ವಹಣೆ, ದಿನಗೂಲಿ ನೌಕರರ ಎಲ್ಲಾ ಪತ್ರ ವ್ಯವಹಾರ, ಸಾಗರ ಮತ್ತು ಶಿಕಾರಿಪುರ ಉಪವಿಭಾಗದ ಪ್ರವಾಸ ಭತ್ಯೆಗಳ ಹಾಗೂ ವಾಹನ ಭತ್ಯೆ ಮೇಲುಸಹಿ ಮತ್ತು ಅಭಿಲೇಕಾಲಯದ ನಿರ್ವಹಣೆ, ಕಛೇರಿಯ ರವಾನೆ ಶಾಖೆಯ ನಿರ್ವಹಣೆ, ಅಂಚೆ ಸೇವಾ ಚೀಟಿಗಳ ಲೆಕ್ಕ ಇತ್ಯಾದಿ.

12) **ದ್ವಿತೀಯ ದರ್ಜೆ ಸಹಾಯಕರು–3(ಸಿಬ್ಬಂದಿ–4):–** ಸಹಾಯಕ ಇಂಜಿನಿಯರ್ / ಕಿರಿಯ ಇಂಜಿನಿಯರ್ ಗೆ ಸಂಬಂಧಿಸಿದ ಪತ್ರ ವ್ಯವ'ಹಾರ, ಸಾರ್ವಜನಿಕ ಕುಂದು ಕೊರತೆ ಹಾಗೂ ಮಾಹಿತಿ ಹಕ್ಕು ಸಂಬಂಧ ಪತ್ರ ವ್ಯವಹಾರ ಉಪವಿಭಾಗದ ಪ್ರವಾಸ ಭತ್ಯೆ ಬಿಲ್ಲುಗಳ ನಿರ್ವಹಣೆ ಕೆ.ಎ.ಟಿ ನ್ಯಾಯಾಲಯ ಪ್ರಕರಣ'ಗಳ ಪತ್ರ ವ್ಯವಹಾರ.

13) **ದ್ವಿತೀಯ ದರ್ಜೆ ಸಹಾಯಕರು–4** :–ವಿಭಾಗ ಕಛೇರಿಯ ಅಧಿಕಾರಿ ಮತ್ತು ಸಿಬ್ಬಂದಿಯವರ ಪ್ರಯಾಣ ಭತ್ಯೆಯ ಬಿಲ್ಲುಗಳ ತಯಾರಿಸುವುದು ನಗದೀಕರಣ, ತಾಂತ್ರಿಕ ಶಾಖೆಯಲ್ಲಿ ವಿಭಾಗದ ಎಂ.ಎಂ.ಆರ್ ಸಭಾ ನಡವಳಿಗಳನ್ನು ತಯಾರಿಸುವುದು ಹಾಗೂ ಎಇ–1 ಮತ್ತು ಎಇ–2 ಇವರಿಗೆ ಕಛೇರಿ ಕೆಲಸದಲ್ಲಿ ನೆರವಾಗುವುದು. ಭೂಮಾಪಕ ಹುದ್ದೆಯ ಮತ್ತು ಅಂಕಿ ಸಂಖ್ಯೆ ವಿಭಾಗದ ಕೆಲಸಗಳ ನಿರ್ವಹಣೆ.

14) **ಶೀಘ್ರಲಿಪಿಗಾರರು:–** ಕಾರ್ಯಪಾಲಕ ಇಂಜಿನಿಯರ್ ರವರಿಗೆ ಆಪ್ತ ಸಹಾಯಕರಾಗಿ ಕೆಲಸ ನಿರ್ವಹಿಸುವುದು ಹಾಗೂ ತಾಂತ್ರಿಕ ಕಾಮಗಾರಿಗಳ ತಪಾಸಣಾ ವರದಿಯನ್ನು ನಿರ್ವಹಿಸುವುದು, ದೂರವಾಣಿ, ಫ್ಯಾಕ್ಸ್‌ಗಳ ನಿರ್ವಹಣೆ, ದೂರವಾಣಿ ವಹಿಗಳ ನಿರ್ವಹಣೆ, ಐ.ಬಿ ಹಾಗೂ ಸರ್ಕಿಟ್ ಹೌಸ್‌ನಲ್ಲಿನ ರೂಂಗಳನ್ನು ಕಾಯ್ದಿರಿಸುವುದು. ವಸತಿ ಗೃಹಗಳಿಗೆ ಸಂಬಂಧಿಸಿದಂತೆ ಪತ್ರ ವ್ಯವಹಾರ .

15) **ಬೆರಳಚ್ಚುಗಾರರು–2:–** ಈ ಕಛೇರಿಯಿಂದ ಮೇಲಾಧಿಕಾರಿಯವರಿಗೆ ಮತ್ತು ಅಧೀನ ಕಛೇರಿಗಳಿಗೆ ಹೋಗುವ ಪತ್ರಗಳನ್ನು ಬೆರಳಚ್ಚು ಮಾಡುವುದು ಇತ್ಯಾದಿ ಕೆಲಸಗಳನ್ನು ನಿರ್ವಹಿಸುತ್ತಾರೆ.

16) **ಡಿ ದರ್ಜೆ ನೌಕರರು–2 :–** ಕಡತ:ಟಪಾಲು ಇತ್ಯಾದಿಗಳನ್ನು ಶಾಖೆಯ ಒಳಗೆ ಹಾಗೂ ಹೊರಗೆ ಸಂಬಂಧಪಟ್ಟವರಿಗೆ ತಲುಪಿಸುವುದು.

17) **ಲೆಕ್ಕ ಪರಿಶೋಧನಾಧಿಕಾರಿಗಳು:–** ಕಛೇರಿ ಲೆಕ್ಕ ಪತ್ರ ಶಾಖೆಯ ಸಂಪೂರ್ಣ ಮೇಲು ಉಸ್ತುವಾರಿ ಮಾಡುವುದು, ವಿಭಾಗ ಹಾಗೂ ಉಪವಿಭಾಗ ಕಛೇರಿಯ ಲೆಕ್ಕ ಪತ್ರಗಳು ಹಾಗೂ ಉಪವಿಭಾಗ ಕಛೇರಿಯ ಕಾಮಗಾರಿ ಬಿಲ್ಲುಗಳ ಪಾಸ್ ಮಾಡುವ ಬಗ್ಗೆ ಸಂಪೂರ್ಣ ಉಸ್ತುವಾರಿ ಹಾಗೂ ಮಾಸಿಕ ಸಭೆಗಳಿಗೆ ಹಾಜರಾಗುವುದು.

18) **ಪ್ರಥಮ ದರ್ಜೆ ಲೆಕ್ಕ ಸಹಾಯಕರು–1** (ನಗದು ಶಾಖೆ):– ಕಾಮಗಾರಿ ನಗದು ಪುಸ್ತಕ ಸಾಮಾನ್ಯ ನಗದು ಪುಸ್ತಕ ನಿರ್ವಹಣೆ ಚೆಕ್ ಬರೆಯುವುದು. ಡಿ.ಸಿ ಬಿಲ್ ತಯಾರಿಸಿ ಸಿಬ್ಬಂದಿ ಸಂಬಳ ವಿತರಣೆ, ಗುತ್ತಿಗೆದಾರರ ಇ.ಎಂ.ಡಿ ಬ್ಯಾಂಕ್ ಗ್ಯಾರಂಟಿಗಳ ನವೀಕರಣ ಮತ್ತು ಪತ್ರ ವ್ಯವಹಾರ ಟೆಂಡರ್ ಫಾರಂ ವಿತರಣೆ, ಎಸ್.ಎಸ್.ಟಿ ತಯಾರಿಕೆ ಎಲ್.ಓ.ಸಿ ಬೇಡಿಕೆ ಪತ್ರ ತಯಾರಿಕೆ ಯು.ಸಿ ಸಲ್ಲಿಸುವುದು. ಎ.ಜಿ ತಪಾಸಣೆ ವರದಿ ರಿಜಾಯಿಂಡರ್ಸ್ ಸಿ.ಎ.ಜಿ ವರದಿಗಳಿಗೆ ಕೇಂದ್ರ ಮತ್ತು ವೃತ್ತ ಕಛೇರಿಯ ಆಡಿಟ್ ಮತ್ತು ಅಕೌಂಟ್ಸ್ ಸಭೆಗೆ ವಿವರ ಒದಗಿಸುವುದು.

19) **ಪ್ರ.ದ.ಲೆ ಸಹಾಯಕರು–2(ಲೆಸ–1):–** ಶಿಕಾರಿಪುರ, ಸೊರಬ ಉಪವಿಭಾಗಗಳ ಲೆಕ್ಕ ಪತ್ರ ನಿರ್ವಹಣೆ ಹಾಗೂ ಬಿಲ್ಲುಗಳ ತಪಾಸಣೆ, ಎಂ.ಎ.ಎಸ್, ಆರ್.ಎಂ.ಎಸ್ ಲೆಕ್ಕ ವಸತಿಗೃಹ ಬಾಡಿಗೆ ಸಿಸಿಬಿ ನಿರ್ವಹಣೆ ವಿಭಾಗದ ಮಾಸಿಕ ಲೆಕ್ಕಪತ್ರಗಳ ಸಂಕಲನ ಮಾಡಿ ಮಹಾಲೇಖಪಾಲರಿಗೆ ಸಲ್ಲಿಸುವುದು. ನಬಾರ್ಡ್ ಮರುಪಾವತಿ ಬಗ್ಗೆ ರಿಜಿಸ್ಟರ್ ನಿರ್ವಹಣೆ ಮತ್ತು ಪತ್ರ ವ್ಯವಹಾರ.

20) **ಪ್ರ.ದ.ಲೆ ಸಹಾಯಕರು–3 (ಲೆಸ–2):–** ವಿಭಾಗದ ಬಜೆಟ್ (ರೆವಿನ್ಯೂ ಬಜೆಟ್ ಸೇರಿದಂತೆ) ತಯಾರಿಕೆ ಕಾಮಗಾರಿ ಪ್ರಗತಿ ಪತ್ರ ತಯಾರಿಕೆ ಅನುದಾನ ಮತ್ತು ವೆಚ್ಚ ತಯಾರಿಕೆ, ರಿಪ್ರಾಪ್ರಿಯೇಷನ್ ತ:ಖ್ತೆ ತಯಾರಿಕೆ ಆದಾಯ ತೆರಿಗೆ, ಮಾರಾಟ ತೆರಿಗೆ ಸರ್ಟಿಫಿಕೇಟ್ ತಯಾರಿಕೆ ಮತ್ತು ವಿತರಣೆ ವಿಧಾನ ಮಂಡಲ ಪ್ರಶ್ನೆಗಳಿಗೆ ಉತ್ತರ ತಯಾರಿಕೆ ಉಗ್ರಾಣ ಬಿಲ್ಲುಗಳ ನಿರ್ವಹಣೆ ಟಿ & ಪಿ ಅರ್ಧವಾರ್ಷಿಕ ದಾಸ್ತಾನು ಸ್ಟಾಕ್ ರಶೀದಿ ಮಾಸಿಕ ವೋಚರ್ ಬಂಡಲ್ ನಿರ್ವಹಣೆ ಸಿ.ಎಸ್.ಎಸ್.ಎ, ಎಂ.ಪಿ.ಡಬ್ಲ್ಯು.ಎ ಪತ್ರ ವ್ಯವಹಾರ.

21) **ದ್ವಿತೀಯ ದರ್ಜೆ ಲೆಕ್ಕ ಸಹಾಯಕರು– 1(ಲೆಸ–3):–** ಸಾಗರ, ಹೊಸನಗರ ಉಪವಿಭಾಗಗಳ ಲೆಕ್ಕಪತ್ರ ನಿರ್ವಹಣೆ ಹಾಗೂ ಬಿಲ್ಲುಗಳ ತಪಾಸಣೆ ಎಂ.ಎ.ಎಸ್, ಆರ್ ಎಂಎಸ್ ಲೆಕ್ಕ , ವಸತಿಗೃಹ ಬಾಡಿಗೆ ಡಿ.ಸಿ.ಬಿ ನಿರ್ವಹಣೆ ಠೇವಣಿ ಹಣ, ಮಾಸಿಕ ಲೆಕ್ಕದ ಜೊತೆ ಸಲ್ಲಿಸಬೇಕಾದ ಷೆಡ್ಯೂಲ್‌ಗಳ ತಯಾರಿಕೆ ಇತ್ಯಾದಿ ಕೆಲಸ ನಿರ್ವಹಣೆ.

22) **ದ್ವಿತೀಯ ದರ್ಜೆ ಉಗ್ರಾಣಪಾಲಕರು:–** ಬಿ.ಆರ್ ವಹಿ ನಿರ್ವಹಣೆ ವಿಭಾಗದ ಬಾಕಿ ಬಿಲ್ಲುಗಳ ಪಟ್ಟಿ ತಯಾರಿಕೆ ವಸತಿಗೃಹ ಬಾಡಿಗೆ, ಡಿಸಿಬಿ ತ:ಖ್ತೆಯನ್ನು ತಯಾರಿಕೆ. ವಾಹನ ಬಾಡಿಗೆ ತ:ಖ್ತೆ ಮತ್ತು ವಹಿಗಳ ನಿರ್ವಹಣೆ ರೆವಿನ್ಯೂ ರಿಸೀಟ್ ತಯಾರಿಕೆ ಮತ್ತು ಉಗ್ರಾಣಕ್ಕೆ ಸಂಬಂಧಿಸಿದ ಎಲ್ಲಾ ಪತ್ರ ವ್ಯವಹಾರಗಳ ನಿರ್ವಹಣೆ. ಮೆಕ್ಯಾನಿಕಲ್ ಶಾಖೆಯಲ್ಲಿನ ಪತ್ರ ವ್ಯವಹಾರ, ಠೇವಣಿವಂತಿಕೆ ಕಾಮಗಾರಿಗಳ ಷೆಡ್ಯೂಲ್ ತಯಾರಿಸಿ ಸಲ್ಲಿಸುವುದು. ಭದ್ರತಾ ಠೇವಣಿ ಮತ್ತು ಠೇವಣಿ ವಂತಿಕೆ ಕಾಮಗಾರಿಗಳ ಅನುದಾನ ವಹಿ ನಿರ್ವಹಣೆ ಮತ್ತು ಗುತ್ತಿಗೆದಾರರ ಭವಿಷ್ಯನಿಧಿ ನಿರ್ವಹಣೆ.

**ನಿಯೋಜನೆಯ ಮೇಲೆ ಕೆಲಸ ಮಾಡುತ್ತಿರುವ ಸಿಬ್ಬಂದಿಗಳು**

1) **ದ್ವಿತೀಯ ದರ್ಜೆ ಸಹಾಯಕರು (ಸಿ–5):–** (ಮಂಗಳೂರು ಲೋಇ ಉಪವಿಭಾಗದಿಂದ) ಕಛೇರಿಗೆ ಬರುವ ಇನ್‌ವರ್ಡ್ ಪತ್ರಗಳ ನಿರ್ವಹಣೆ ಇತ್ಯಾದಿ

2) **ಕ್ಲೀನರ್**: (ನಂ:1 ಲೋ.ಇ ಉಪವಿಭಾಗ ಶಿವಮೊಗ್ಗದಿಂದ ನಿಯೋಜನೆಯಲ್ಲಿದ್ದಾರೆ)
ಕಡತಗಳು: ಟಪಾಲು ಇತ್ಯಾದಿಗಳನ್ನು ಶಾಖೆಯ ಒಳಗೆ ಹೊರಗೆ ಸಂಬಂಧಪಟ್ಟವರಿಗೆ ತಲುಪಿಸುವುದು.

3) **ಡಿ ದರ್ಜೆ ನೌಕರರು:–** (ಭದ್ರಾವತಿ ಲೋ.ಇ ಉಪವಿಭಾಗದಿಂದ ನಿಯೋಜನೆಯ ಮೇಲಿದ್ದಾರೆ)
ನೌಕರರು ಕಛೇರಿಯ ರಾತ್ರಿ ಕಾವಲುಗಾರರಾಗಿ ಕೆಲಸ ನಿರ್ವಹಿಸುತ್ತಾರೆ.

4) **ಡಿ ದರ್ಜೆ ನೌಕರರು:–** (ಲೋ.ಇ ಉಪವಿಭಾಗ ಸಾಗರದಿಂದ ನಿಯೋಜನೆಯಲ್ಲಿದ್ದಾರೆ)
ಕಡತಗಳು: ಟಪಾಲು ಇತ್ಯಾದಿಗಳನ್ನು ಶಾಖೆಯ ಒಳಗೆ ಹೊರಗೆ ಸಂಬಂಧಪಟ್ಟವರಿಗೆ ತಲುಪಿಸುವುದು.

**3. ಮೇಲ್ವಿಚಾರಣೆ ಮತ್ತು ಜವಾಬ್ದಾರಿಗಳನ್ನು ಒಳಗೊಂಡಂತೆ, ತೀರ್ಮಾನ ಕೈಗೊಳ್ಳುವಲ್ಲಿ ಅನುಸರಿಸುವ ಕ್ರಮಗಳು:**

1) **ಕಾರ್ಯಪಾಲಕ ಇಂಜಿನಿಯರ್:-** ಸರ್ಕಾರದಿಂದ ಲಭ್ಯವಾದ ಅಧಿಕಾರ ಪ್ರತ್ಯಾ ಯೋಜನೆಯ ಅನುಸಾರ ತಾಂತ್ರಿಕ ಮತ್ತು ಆಡಳಿತಾತ್ಮಕ ವಿಷಯಗಳ ಬಗ್ಗೆ ನಿರ್ಣಯ ಕೈಗೊಳ್ಳುವುದು, ವಿಭಾಗ ವ್ಯಾಪ್ತಿಯ ಕಾಮಗಾರಿಯ ಕಾರ್ಯ ನೀತಿಯ ಬಗ್ಗೆ ಪ್ರಸ್ತಾವನೆಗಳನ್ನು ವೃತ್ತ ಹಾಗೂ ಕೇಂದ್ರ ಕಛೇರಿಗೆ ಸಲ್ಲಿಸುವುದು.

2) **ತಾಂತ್ರಿಕ ಸಹಾಯಕರು:** ತಾಂತ್ರಿಕ ವಿಷಯಗಳ ಬಗ್ಗೆ ಹಾಗೂ ಇಲಾಖಾ ಕಾಮಗಾರಿಗಳ ಬಗ್ಗೆ ನಕ್ಷೆ ಅಂದಾಜು ಪತ್ರಗಳನ್ನು ಪರಿಶೀಲಿಸುವುದು, ಅಧಿಕಾರ ಪ್ರತ್ಯಾ ಯೋಜನೆಯ ಪ್ರಕಾರ ಕಾರ್ಯಪಾಲಕ ಇಂಜಿನಿಯರ್‌ರವರ ಅನುಮೋದನೆಗೆ ಮಂಡಿಸುವುದು. ಕಾರ್ಯಪಾಲಕ ಇಂಜಿನಿಯರ್ ರವರಿಗೆ ತಾಂತ್ರಿಕ ವಿಷಯಗಳ ಬಗ್ಗೆ ಮಾಹಿತಿ ಒದಗಿಸುವುದು.

3) **ಸಹಾಯಕ ಇಂಜಿನಿಯರ್**: ಕಿರಿಯ ಇಂಜಿನಿಯರ್:- ವಿಭಾಗ ವ್ಯಾಪ್ತಿಯ ಟೆಂಡರ್, ನಕ್ಷೆ, ಅಂದಾಜು ಪತ್ರಗಳ ಪರಿಶೀಲನೆ, ಕಡತ ಮಂಡಿಸುವುದು ಅಧಿಕಾರ ಪ್ರತ್ಯಾಯೋಜನೆಯ ಬಗ್ಗೆ ಮಾಹಿತಿ ಒದಗಿಸುವುದು.

4) **ಸಾಂಖ್ಯಿಕ ನಿರೀಕ್ಷಕರು:-** ಶಿವಮೊಗ್ಗ ವಿಭಾಗದ ವ್ಯಾಪ್ತಿ ರಸ್ತೆ, ಸೇತುವೆ, ಕಟ್ಟಡಗಳ ಅಂಕಿ ಅಂಶ ಸಂಗ್ರಹಣೆ ಮತ್ತು ವರದಿ ಸಲ್ಲಿಸುವುದು.

5) **ಪ್ರಥಮ ದರ್ಜೆ ಭೂ-ಮಾಪಕರು:-** ಜಿಲ್ಲಾ ಮತ್ತು ರಾಜ್ಯ ಹೆದ್ದಾರಿ ರಸ್ತೆಗಳ ಅತಿಕ್ರಮಣ, ಅಗಲೀಕರಣದ ನ್ಯಾಯಾಲಯ ಪ್ರಕರಣಗಳ ಇತ್ಯರ್ಥ ಹಾಗೂ ಜಿಲ್ಲಾ ಹಾಗೂ ರಾಜ್ಯ ರಸ್ತೆಗಳ ಘೋಷಣೆ ಮತ್ತು ಗೆಜೆಟ್ ನಲ್ಲಿ ಪ್ರಕಟಿಸುವ ಪ್ರಕ್ರಿಯೆ.

6) **ಅಧೀಕ್ಷಕರು :-** ಕಚೇರಿಯ ಎಲ್ಲಾ ಸಿಬ್ಬಂದಿಗಳ ನಿರ್ವಹಣೆ ಆಡಳಿತ ಶಾಖೆಯ ಮೇಲ್ವಿಚಾರಣೆ, ಕಡತಗಳ ವಿಲೇವಾರಿಗೆ ಕ್ರಮ ಕೈಗೊಳ್ಳುವುದು.

7) **ಪ್ರಥಮ ದರ್ಜೆ ಮತ್ತು ದ್ವಿತೀಯ ದರ್ಜೆ ಸಹಾಯಕರು :-** ಪ್ರಸ್ತಾವನೆಗಳು ಕಡತಗಳನ್ನು ನಿಯಮಾನುಸಾರ ಪರಿಶೀಲಿಸಿ ಅಭಿಪ್ರಾಯ, ಶಿಫಾರಸ್ಸಿನೊಂದಿಗೆ ಆದೇಶಕ್ಕಾಗಿ ಮೇಲಾಧಿಕಾರಿಗಳಿಗೆ ಮಂಡಿಸುವುದು.

8) **ಶೀಘ್ರಲಿಪಿಗಾರರು :-** ಕಾರ್ಯಪಾಲಕ ಇಂಜಿನಿಯರ್‌ರವರ ಆಪ್ತ ಸಹಾಯಕರಾಗಿದ್ದು ಕಡತಗಳ ವಿಲೇವಾರಿ ಬಗ್ಗೆ ಕಾರ್ಯಪಾಲಕ ಇಂಜಿನಿಯರ್‌ರವರಿಗೆ ಸಹಕರಿಸುವುದು, ದೂರವಾಣಿ, ಫ್ಯಾಕ್ಸ್‌ಗಳ ನಿರ್ವಹಣೆ ಟಿ.ಬಿ. ಯಲ್ಲಿನ ರೂಂಗಳ ಕಾಯ್ದಿರಿಸುವಿಕೆ. ವಸತಿಗೃಹಗಳಿಗೆ ಸಂಬಂಧಿಸಿದ ಪತ್ರ ವ್ಯವಹಾರ .

9) **ಬೆರಳಚ್ಚುಗಾರರು :-** ಕಡತಗಳ ಶುದ್ಧಪ್ರತಿ ತಯಾರಿಸುವುದು.

10) **ಚಾಲಕ :-** ಕಾರ್ಯಪಾಲಕ ಇಂಜಿನಿಯರ್‌ರವರ ವಾಹನ ಚಾಲನೆಯ ಕೆಲಸ ಮತ್ತು ವಾಹನದ ಉಸ್ತುವಾರಿ ನಿರ್ವಹಿಸುವುದು.

11) **ಡಿ ದರ್ಜೆ ನೌಕರರು :-** ಕಛೇರಿಯ ಎಲ್ಲಾ ಕೊಠಡಿಗಳ ಶುಚಿತ್ವದ ನಿರ್ವಹಣೆ, ಕಡತ , ಟಪಾಲು ಇತ್ಯಾದಿಗಳನ್ನು ಶಾಖೆಯೊಳಗೆ ಮತ್ತು ಹೊರಗೆ ಸಂಬಂಧಿಸಿದವರಿಗೆ ತಲುಪಿಸುವುದು.

12) **ಲೆಕ್ಕ ಪರಿಶೋಧನಾಧಿಕಾರಿಗಳು :-** ಲೆಕ್ಕಪತ್ರ ಶಾಖೆಯ ಮೇಲ್ವಿಚಾರಣೆ ಕಡತಗಳ ವಿಲೇವಾರಿಗೆ ಕ್ರಮಕೈಗೊಳ್ಳುವುದು.

13) **ಪ್ರಥಮ ದರ್ಜೆ ಲೆಕ್ಕ ಸಹಾಯಕರು-ದ್ವಿ.ದ.ಲೆ.ಸಹಾಯಕರು :-** ಪ್ರಸ್ತಾವನೆಗಳನ್ನು ನಿಯಮಾನುಸಾರ ಪರಿಶೀಲಿಸಿ ಅಭಿಪ್ರಾಯ ಶಿಫಾರಸ್ಸಿನೊಂದಿಗೆ ಆದೇಶಕ್ಕಾಗಿ ಮೇಲಾಧಿಕಾರಿಗಳಿಗೆ ಮಂಡಿಸುವುದು.

14) **ದ್ವಿತೀಯ ದರ್ಜೆ ಉಗ್ರಾಣ ಪಾಲಕರು :-** ಉಗ್ರಾಣ ಶಾಖೆಯ ಮೇಲ್ವಿಚಾರಣೆ ಕಡತಗಳ ವಿಲೇವಾರಿಗೆ ಕ್ರಮಕೈಗೊಳ್ಳುವುದು ಪ್ರಸ್ತಾವನೆಗಳನ್ನು ನಿಯಮಾನುಸಾರ ಪರಿಶೀಲಿಸಿ ಅಭಿಪ್ರಾಯ ಶಿಫಾರಸ್ಸಿನೊಂದಿಗೆ ಆದೇಶಕ್ಕಾಗಿ ಮೇಲಾಧಿಕಾರಿಗಳಿಗೆ ಮಂಡಿಸುವುದು.

**4) ಕಾರ್ಯನಿರ್ವಹಿಸುವಲ್ಲಿ ಅನುಸರಿಸುವ ಮಾನದಂಡಗಳು :-** ಕೆ ಪಿ ಡಬ್ಲ್ಯು ಡಿ ಕೋಡ್ ಮತು ಕೆ ಪಿ ಡಬ್ಲ್ಯು ಎ ಕೋಡ್ ಕರ್ನಾಟಕ ಟ್ರಾನ್ಸ್‌ಫರೆನ್ಸಿ ಇನ್ ಪಬ್ಲಿಕ್ ಪ್ರಕ್ಯೂರ್‌ಮೆಂಟ್ ಆಕ್ಟ್ 2002ನಲ್ಲಿ ನಿಗದಿಪಡಿಸಿರುವ ಮಾನದಂಡಗಳನ್ನು ಅನುಸರಿಸುವುದು.

**5. ಕಾರ್ಯಗಳನ್ನು ನಿರ್ವಹಿಸುವಲ್ಲಿ ಇಲಾಖೆಯ ಸಿಬ್ಬಂದಿ ಹೊಂದಿರುವ ಅಥವಾ ಉಪಯೋಗಿಸುವ ನಿಯಮಗಳು: ನಿಬಂಧನೆಗಳು ಸೂಚನೆಗಳು ಕೈಪಿಡಿ ಮತ್ತು ದಾಖಲೆಗಳು :**

ಅ) ಕರ್ನಾಟಕ ನಾಗರೀಕ ಸೇವಾ ನಿಯಮಗಳು 1958

ಆ) ಕರ್ನಾಟಕ ಆರ್ಥಿಕ ಸಂಹಿತೆ ನಿಯಮ

ಇ) ಖಜಾನೆ ಸಂಹಿತೆ.

ಈ) ಸಾದಿಲ್ವಾರು ವೆಚ್ಚದ ಕೈಪಿಡಿ

ಉ) ಕೆ ಪಿ ಡಬ್ಲ್ಯು ಡಿ 'ಎ' ಕೋಡ್

ಊ) ಕೆ ಪಿ ಡಬ್ಲ್ಯು ಡಿ 'ಡಿ' ಕೋಡ್

ಋ) ಕರ್ನಾಟಕ ನಾಗರೀಕ ಸೇವೆಗಳು (ನಡತೆ) ನಿಯಮಗಳು 1966

ಎ) ಕರ್ನಾಟಕ ನಾಗರೀಕ ಸೇವೆಗಳು (ಸಿ ಸಿ ಎ) ನಿಯಮಗಳು 1957

ಏ) ಕರ್ನಾಟಕ ಸರ್ಕಾರ ಸರ್ಕಾರಿ ವಸತಿಗೃಹಗಳ ಹಂಚಿಕೆ ನಿಯಮಗಳು 1986

ಐ) ಕಾರ್ಯಾಲಯದ ಕೈಪಿಡಿ

ಒ) ಉಗ್ರಾಣದ ಕೈಪಿಡಿ

ಓ) ಆರ್ಥಿಕ್ ಅಧಿಕಾರ ಪ್ರತ್ಯಾಯೋಜನೆಯ ನಿಯಮಗಳು(ಆದೇಶ ದಿನಾಂಕ:02–02–2001)

ಔ) ಲೋಇ ಮತ್ತು ನೀರಾವರಿ ಇಲಾಖಾ ಅಧಿಕಾರ ಪ್ರತ್ಯಾಯೋಜನೆಯ ನಿಯಮಗಳು(ಆದೇಶ ದಿ:15–12–1994)

ಅಂ) ಸೇವಾ ವಿಷಯಗಳು ಇತ್ಯಾದಿ ವಿಚಾರದಲ್ಲಿ ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ : ಆರ್ಥಿಕ ಇಲಾಖೆ: ಲೋಇ ಹೊರಡಿಸಿದ ಆದೇಶದ ಸುತ್ತೋಲೆ , ಸೂಚನೆಗಳು

**6. ಇಲಾಖೆಯು ಹೊಂದಿರುವ ದಸ್ತಾವೇಜುಗಳ ಪಟ್ಟಿ :–**

1) ವಿಷಯ ವಹಿ, ಸಿಬ್ಬಂದಿ ವಹಿ
2) ವಿಧಾನಸಭೆ : ವಿಧಾನಪರಿಷತ್ ಪ್ರಶ್ನೆಗಳಿಗೆ ಸಂಬಂಧಿಸಿದ ರಿಜಿಸ್ಟರ್
3) ನ್ಯಾಯಾಲಯದ : ಕೆಎಟಿ : ಕಾರ್ಮಿಕ ಪ್ರಕರಣಗಳ ರಿಜಿಸ್ಟರ್
4) ಟೆಂಡರ್ ಅನುಮೋದನೆ ರಿಜಿಸ್ಟರ್
5) ಆಯವ್ಯಯ ಅಂದಾಜುಪಟ್ಟಿ ಅನಮೋದನೆ ರಿಜಿಸ್ಟರ್
6) ಖರೀದಿ ಸಮಿತಿ ಅನುಮೋದನೆ ರಿಜಿಸ್ಟರ್
7) ಇಲಾಖಾ ರಸ್ತೆ, ಕಟ್ಟಡ, ಸೇತುವೆಗಳ ಅಂಕಿ–ಅಂಶದ ರಿಜಿಸ್ಟರ್
8) ಇತರೆ ರಿಜಿಸ್ಟರ್‌ಗಳು

**7. ನೀತಿ–ನಿಯಮಗಳನ್ನು ರೂಪಿಸಲು ಸಾರ್ವಜನಿಕರೊಂದಿಗೆ ಸಮಾಲೋಚಿಸಲು ಅಸ್ತಿತ್ವದಲ್ಲಿರುವ ಕಾರ್ಯ ವಿಧಾನದ ವಿವರಗಳು:**

ಸಹಾಯಕ ಮಾಹಿತಿ ಅಧಿಕಾರಿಯನ್ನಾಗಿ ವಿಭಾಗ ಕಛೇರಿಯ ತಾಂತ್ರಿಕ ಸಹಾಯಕರನ್ನು ನೇಮಕ ಮಾಡಲಾಗಿದೆ. ಇವರು ಸಂಬಂಧಿಸಿದ ಸಾರ್ವಜನಿಕ ವ್ಯಕ್ತಿಗಳಿಂದ ದೂರು ಆಕ್ಷೇಪಣೆಗಳನ್ನು ಸ್ವೀಕರಿಸಿ ಪರಿಶೀಲಿಸಿ ಅಂತಿಮ ಆದೇಶವನ್ನು ಹೊರಡಿಸಲು ಸಾರ್ವಜನಿಕ ಮಾಹಿತಿ ಅಧಿಕಾರಿಗಳಾದ ಕಾರ್ಯಪಾಲಕ ಇಂಜಿನಿಯರ್‌ರವರಿಗೆ ಸಹಕಾರ ನೀಡುವರು.

**8**. ಸರ್ಕಾರದ ಒಂದು ಭಾಗವಾಗಿ ಅಥವಾ ಸಲಹೆಗಳನ್ನು ಪಡೆಯಲು ರಚಿತವಾದ 2 ಮತ್ತು ಹೆಚ್ಚು ವ್ಯಾಪ್ತಿಗಳನ್ನೊಳಗೊಂಡ ಮಂಡಳಿ, ಪರಿಷತ್ತು ಸಮಿತಿ ಮತ್ತು ಇತರೆ ಅಂಗಗಳು ಮತ್ತು ಅವುಗಳ ಸಭೆಗಳು ಸಾರ್ವಜನಿಕರ ಪ್ರವೇಶಕ್ಕೆ ಮುಕ್ತವಾಗಿದೆಯೆ ಅಥವಾ ಈ ಸಭೆಗಳ ನಡವಳಿಗಳು ಸಾರ್ವಜನಿಕರಿಗೆ ದೊರಕುತ್ತಿದೆಯೆ ಎಂಬ ಬಗ್ಗೆ ವಿವರಣೆ.

– ಯಾವುದೂ ಇರುವುದಿಲ್ಲ –

**9. ಲೋಕೋಪಯೋಗಿ ಇಲಾಖೆಯ ಅಧಿಕಾರಿಗಳ ಮತ್ತು ಸಿಬ್ಬಂದಿ ವರ್ಗದವರ ನಿರ್ದೇಶಿಕೆ**

| ಕ್ರಮ ಸಂಖ್ಯೆ | ಹೆಸರು ಮತ್ತು ಹುದ್ದೆ ಶ್ರೀ / ಶ್ರೀಮತಿ | ಕಛೇರಿ ವಿಳಾಸ | ದೂರವಾಣಿ ಸಂಖ್ಯೆ (ಕಛೇರಿ) |
|---|---|---|---|
| 1 | ಜಿ.ಆರ್. ಚಂದ್ರಶೇಖರಪ್ಪ , ಕಾರ್ಯಪಾಲಕ ಇಂಜಿನಿಯರ್ | ಲೋಇ ವಿಭಾಗ, ಶಿವಮೊಗ್ಗ | 274942 |
| 2 | ಡಿ.ಎಸ್. ನಾಗರಾಜ್, ತಾಂತ್ರಿಕ ಸಹಾಯಕರು | ಲೋಇ ವಿಭಾಗ, ಶಿವಮೊಗ್ಗ | 274942 |
| 3 | ಪಿ.ಹೆಚ್. ಫಜಲುಲ್ಲಾ, ಸಹಾಯಕ ಇಂಜಿನಿಯರ್ | ಲೋಇ ವಿಭಾಗ, ಶಿವಮೊಗ್ಗ | 274942 |
| 4 | ಜೆ.ಎ. ಜಯಪ್ರಕಾಶ್, ಸಹಾಯಕ ಇಂಜಿನಿಯರ್ | ಲೋಇ ವಿಭಾಗ, ಶಿವಮೊಗ್ಗ | 274942 |
| 5 | ಎಂ.ಆರ್. ಮೂರ್ತಿ, ಕಿರಿಯ ಇಂಜಿನಿಯರ್ | ಲೋಇ ವಿಭಾಗ, ಶಿವಮೊಗ್ಗ | 274942 |
| 6 | ಜೆ. ಶ್ರೀಪಾದ್, ಕಿರಿಯ ಇಂಜಿನಿಯರ್ | ಲೋಇ ವಿಭಾಗ, ಶಿವಮೊಗ್ಗ | 272319 |
| 7 | ಲತಾಮಂಜರಿ, ಕಿರಿಯ ಇಂಜಿನಿಯರ್ | ಲೋಇ ವಿಭಾಗ, ಶಿವಮೊಗ್ಗ | 274942 |
| 8 | ವೇದಾವತಿ, ಅಧೀಕ್ಷಕರು | ಲೋಇ ವಿಭಾಗ, ಶಿವಮೊಗ್ಗ | 274942 |
| 9 | ವಿಕ್ಟೋರಿಯಾ ಮೇರಿ, ಪ್ರ.ದ.ಸ. | ಲೋಇ ವಿಭಾಗ, ಶಿವಮೊಗ್ಗ | 274942 |
| 10 | ಎಂ.ಎಸ್. ಆನಂದ್, ದ್ವಿ.ದ.ಸ. | ಲೋಇ ವಿಭಾಗ, ಶಿವಮೊಗ್ಗ | 274942 |
| 11 | ಹೆಚ್.ಆರ್. ಕುಮಾರ್, ದ್ವಿದ.ಸ. | ಲೋಇ ವಿಭಾಗ, ಶಿವಮೊಗ್ಗ | 274942 |
| 12 | ಕೆ.ಆರ್. ನಾಗೇಶ್, ದ್ವಿ.ದ.ಸ. | ಲೋಇ ವಿಭಾಗ, ಶಿವಮೊಗ್ಗ | 274942 |
| 13 | ಸಿ.ಆರ್. ರಾಜ್‌ಕುಮಾರ್, ದ್ವಿ.ದ.ಸ. | ಲೋಇ ವಿಭಾಗ, ಶಿವಮೊಗ್ಗ | 274942 |
| 14 | ಪಿ. ಮಾಲತಿ, ಟೈಪಿಸ್ಟ್ | ಲೋಇ ವಿಭಾಗ, ಶಿವಮೊಗ್ಗ | 274942 |

| ಕ್ರಮ ಸಂಖ್ಯೆ | ಹೆಸರು ಮತ್ತು ಹುದ್ದೆ ಶ್ರೀ / ಶ್ರೀಮತಿ | ಕಛೇರಿ ವಿಳಾಸ | ದೂರವಾಣಿ ಸಂಖ್ಯೆ (ಕಛೇರಿ) |
|---|---|---|---|
| 15 | ವಿ. ರಾಜೇಶ್ವರಿ, ಟೈಪಿಸ್ಟ್ | ಲೋಇ ವಿಭಾಗ, ಶಿವಮೊಗ್ಗ | 274942 |
| 16 | ಖತೀಜ, ಡಿ ದರ್ಜೆ | ಲೋಇ ವಿಭಾಗ, ಶಿವಮೊಗ್ಗ | 274942 |
| 17 | ಹೆಚ್.ಎಸ್. ಗಂಗಮ್ಮ, ಡಿ ದರ್ಜೆ | ಲೋಇ ವಿಭಾಗ, ಶಿವಮೊಗ್ಗ | 274942 |
| 18 | ನಾರಾಯಣಪ್ಪ, ಲೆಕ್ಕಪರಿಶೋಧನಾಧಿಕಾರಿ | ಲೋಇ ವಿಭಾಗ, ಶಿವಮೊಗ್ಗ | 274942 |
| 19 | ರವಿಸುತ, ದ್ವಿ.ದ.ಲೆ.ಸ. | ಲೋಇ ವಿಭಾಗ, ಶಿವಮೊಗ್ಗ | 274942 |
| 20 | ಜಿ.ಟಿ. ಬಸವರಾಜಪ್ಪ ಪ್ರ.ದ.ಲೆ.ಸ. | ಲೋಇ ವಿಭಾಗ, ಶಿವಮೊಗ್ಗ | 274942 |
| 21 | ಎನ್.ವಿ. ಜಗದೀಶ್, ಪ್ರ.ದ.ಲೆ.ಸ. | ಲೋಇ ವಿಭಾಗ, ಶಿವಮೊಗ್ಗ | 274942 |
| 22 | ಸಿ. ನಾಗರಾಜ, ಪ್ರ.ದ.ಲೆ.ಸ. | ಲೋಇ ವಿಭಾಗ, ಶಿವಮೊಗ್ಗ | 274942 |
| 23 | ಎಸ್. ವಸಂತ್, ದ್ವಿ.ದ.ಉ.ಪಾಲಕರು | ಲೋಇ ವಿಭಾಗ, ಶಿವಮೊಗ್ಗ | 274942 |
| 24 | ಗೌಸ್‌ಪೀರ್ ಚಾಲಕ | ಲೋಇ ವಿಭಾಗ, ಶಿವಮೊಗ್ಗ | 274942 |

**ನಿಯೋಜನೆ ಮೇಲಿನ ಸಿಬ್ಬಂದಿ**

| ಕ್ರಮ ಸಂಖ್ಯೆ | ಹೆಸರು ಮತ್ತು ಹುದ್ದೆ ಶ್ರೀ / ಶ್ರೀಮತಿ | ಕಛೇರಿ ವಿಳಾಸ | ದೂರವಾಣಿ ಸಂಖ್ಯೆ (ಕಛೇರಿ) |
|---|---|---|---|
| 1 | ಜರೀನಾ ಬೇಗಂ ಉರುಫ್ ಜಯಂತಿ, ದ್ವಿ.ದ.ಸ. | ಲೋಇ ವಿಭಾಗ, ಶಿವಮೊಗ್ಗ | 274942 |
| 2 | ಎ.ಎಂ. ಲೋಕೇಶ್‌ರಾವ್, ಕ್ಲೀನರ್ | ಲೋಇ ವಿಭಾಗ, ಶಿವಮೊಗ್ಗ | 274942 |
| 3 | ಎಂ.ಶ್ರೀನಿವಾಸ್ ಡಿ ದರ್ಜೆ | ಲೋಇ ವಿಭಾಗ, ಶಿವಮೊಗ್ಗ | 274942 |
| 4 | ಗಂಗಯ್ಯ, ಡಿ ದರ್ಜೆ | ಲೋಇ ವಿಭಾಗ, ಶಿವಮೊಗ್ಗ | 274942 |

**10. ನಿಯಮಾನುಸಾರ ಅಧಿಕಾರಿಗಳು ಮತ್ತು ಸಿಬ್ಬಂದಿ ವರ್ಗದವರು ಪಡೆಯುತ್ತಿರುವ ಮಾಸಿಕ ವೇತನ ವಿವರಗಳು**

| ಕ್ರಮ ಸಂಖ್ಯೆ | ಹೆಸರು ಮತ್ತು ಹುದ್ದೆ ಶ್ರೀ : ಶ್ರೀಮತಿ | ವೇತನ ಶ್ರೇಣಿ | ಮೂಲ ವೇತನ |
|---|---|---|---|
| 1 | ಜಿ.ಆರ್. ಚಂದ್ರಶೇಖರಪ್ಪ, ಕಾರ್ಯಪಾಲಕ ಇಂಜಿನಿಯರ್ | 18150–26925 | 26925 |
| 2 | ಡಿ.ಎಸ್. ನಾಗರಾಜ್, ತಾಂತ್ರಿಕ ಸಹಾಯಕರು | 14050–25050 | 25650 |
| 3 | ಪಿ.ಹೆಚ್. ಫಜಲುಲ್ಲಾ, ಸಹಾಯಕ ಇಂಜಿನಿಯರ್ | 14050–25050 | 24450 |
| 4 | ಜೆ.ಎ. ಜಯಪ್ರಕಾಶ್, ಸಹಾಯಕ ಇಂಜಿನಿಯರ್ | 11400–21600 | 18600 |
| 5 | ಎಂ.ಆರ್.ಮೂರ್ತಿ, ಕಿರಿಯ ಇಂಜಿನಿಯರ್ | 8825–16000 | 13000 |
| 6 | ಜೆ. ಶ್ರೀಪಾದ್, ಕಿರಿಯ ಇಂಜಿನಿಯರ್ | 8825–16000 | 11700 |
| 7 | ಲತಾಮಂಜರಿ, ಕಿರಿಯ ಇಂಜಿನಿಯರ್ | 8825–16000 | 9500 |
| 8 | ವೇದಾವತಿ, ಅಧೀಕ್ಷಕರು | 10000–18150 | 14400 |
| 9 | ವಿಕ್ಟೋರಿಯಾ ಮೇರಿ, ಪ್ರ.ದ.ಸ. | 8825–16000 | 11100 |
| 10 | ಎಂ.ಎಸ್. ಆನಂದ್, ದ್ವಿ.ದ.ಸ. | 6800–13000 | 9050 |
| 11 | ಹೆಚ್.ಆರ್. ಕುಮಾರ್, ದ್ವಿದ.ಸ. | 6250–12000 | 7625 |
| 12 | ಕೆ.ಆರ್. ನಾಗೇಶ್, ದ್ವಿ.ದ.ಸ. | 5800–10500 | 7100 |
| 13 | ಸಿ.ಆರ್. ರಾಜ್‌ಕುಮಾರ್, ದ್ವಿ.ದ.ಸ. | 7275–13350 | 10000 |
| 14 | ಪಿ. ಮಾಲತಿ, ಟೈಪಿಸ್ಟ್ | 7275–13350 | 9275 |
| 15 | ವಿ. ರಾಜೇಶ್ವರಿ, ಟೈಪಿಸ್ಟ್ | 6800–13000 | 9050 |
| 16 | ಗೌಸ್‌ಫೀರ್, ಚಾಲಕ | 5800–10500 | 9600 |
| 17 | ಖತೀಜ, ಡಿ ದರ್ಜೆ | 5200–8200 | 6375 |
| 18 | ಹೆಚ್.ಎಸ್. ಗಂಗಮ್ಮ, ಡಿ ದರ್ಜೆ | 5200–8200 | 7625 |

| ಕ್ರಮ ಸಂಖ್ಯೆ | ಹೆಸರು ಮತ್ತು ಹುದ್ದೆ ಶ್ರೀ : ಶ್ರೀಮತಿ | ವೇತನ ಶ್ರೇಣಿ | ಮೂಲ ವೇತನ |
|---|---|---|---|
| 19 | ನಾರಾಯಣಪ್ಪ ಲೆಕ್ಕಪರಿಶೋಧನಾಧಿಕಾರಿ | 11400–21600 | 18150 |
| 20 | ರವಿಸುತ, ದ್ವಿ.ದ.ಲೆ.ಸ. | 5800–10500 | 9500 |
| 21 | ಜಿ.ಟಿ. ಬಸವರಾಜಪ್ಪ ಪ್ರ.ದ.ಲೆ.ಸ. | 7275–13350 | 9750 |
| 22 | ಎನ್.ವಿ. ಜಗದೀಶ್, ಪ್ರ.ದ.ಲೆ.ಸ. | 7275–13350 | 8825 |
| 23 | ಸಿ. ನಾಗರಾಜ, ಪ್ರ.ದ.ಲೆ.ಸ. | 7275–13350 | 8000 |
| 24 | ಎಸ್. ವಸಂತ್, ದ್ವಿ.ದ.ಉ. ಪಾಲಕರು | 6250–12000 | 12000 |

**ನಿಯೋಜನೆಯ ಮೇಲೆ ಇರುವ ನೌಕರರು**

| | | | |
|---|---|---|---|
| 1 | ಜರೀನಾ ಬೇಗಂ ಉರುಫ್ ಜಯಂತಿ, ದ್ವಿ.ದ.ಸ. | 6800–13000 | 8200 |
| 2 | ಎ.ಎಂ. ಲೋಕೇಶ್‌ರಾವ್, ಕ್ಲೀನರ್ | 5200–8200 | 7625 |
| 3 | ಎಂ. ಶ್ರೀನಿವಾಸ್, ಡಿ ದರ್ಜೆ | 4800–7275 | 5300 |
| 4 | ಗಂಗಯ್ಯ | 4800–7275 | 6900 |

**1. 2008–09ನೇ ಸಾಲಿನ ಆಯವ್ಯಯದಲ್ಲಿ ಲೋಇ ವಿವಿಧ ಯೋಜನಾವಾರು ವಿವಿಧ ಲೆಕ್ಕಶೀರ್ಷಿಕೆಯಡಿಯಲ್ಲಿ ನಿಗದಿಪಡಿಸಲಾದ ಅನುದಾನದ ವಿವರಗಳು.**

2008–09ನೇ ಸಾಲಿನಲ್ಲಿ ಶಿವಮೊಗ್ಗ ಲೋಇ ವಿಭಾಗಕ್ಕೆ ಆಯವ್ಯಯ ಕಟ್ಟಡ ಕಾಮಗಾರಿಗಳಿಗೆ ಒದಗಿಸಲಾದ ಅನುದಾನದ ವಿವರ

| ಕ್ರಮ ಸಂಖ್ಯೆ | ಲೆಕ್ಕಶೀರ್ಷಿಕೆ | 2008–09ರ ಅನುದಾನ (ರೂ.ಲಕ್ಷಗಳಲ್ಲಿ) |
|---|---|---|
| 1 | 4059 ನ್ಯಾಯಾಂಗ ಆಡಳಿತ (ಕೇಂದ್ರ ಪುರಸ್ಕೃತ ಯೋಜನೆ) | 181.64 |
| 2 | 4059 ನ್ಯಾಯಾಂಗ ಆಡಳಿತ (ರಾಜ್ಯವಲಯ ಯೋಜನೆ) | 77.62 |
| 3 | 4059 ಮಿನಿ ವಿಧಾನಸೌಧ | 60.63 |
| 4 | 4059 ನ್ಯಾಯಾಲಯ ಕಟ್ಟಡ | 33.00 |
| 5 | 4059 ಕಾರಾಗೃಹ | – |
| 6 | 4059 ಲೋಕೋಪಯೋಗಿ | 791.69 |
| 7 | 4059 ಅಗ್ನಿಶಾಮಕ ಮತ್ತು ರಕ್ಷಣೆ | 98.78 |
| 8 | 4059 ಜಿಲ್ಲಾಡಳಿತ | 373.50 |
| 9 | 4059 ಅಬಕಾರಿ | – |
| 10 | 4059 ವಾಣಿಜ್ಯ ತೆರಿಗೆ | 162.30 |
| 11 | 4059 ಕಾಲೇಜು ಶಿಕ್ಷಣ | 459.00 |
| 12 | 4059 ಪ್ರೌಢ ಶಿಕ್ಷಣ | 675.00 |
| 13 | 4059 ತಾಂತ್ರಿಕ ಶಿಕ್ಷಣ | 322.50 |
| 14 | 4059 ಇತರೆ | 796.15 |
| 15 | 4059 ಆರ್.ಟಿ.ಓ. | 180.73 |
| 16 | 4216 ನ್ಯಾಯಾಂಗ ಆಡಳಿತ (ಕೇಂದ್ರ ಪುರಸ್ಕೃತ ಯೋಜನೆ) | 10.66 |
| 17 | 4216 ಇತರೆ | 411.52 |
| 18 | 4216 ಅಗ್ನಿಶಾಮಕ ಮತ್ತು ನಿಯಂತ್ರಣ | 90.00 |
| 19 | 4216 ನ್ಯಾಯಾಲಯ ಕಟ್ಟಡ (ರಾಜ್ಯ ಪುರಸ್ಕೃತ) | 165.00 |
| 20 | 4202 ಉನ್ನತ ಶಿಕ್ಷಣ | 259.98 |
| 21 | 4202 ಪದವಿಪೂರ್ವ ಕಾಲೇಜು ಶಿಕ್ಷಣ | 128.05 |
| 22 | 4202 ತಾಂತ್ರಿಕ ಶಿಕ್ಷಣ | 28.04 |
| 23 | 2216 ಇತರೆ | 119.26 |

| ಕ್ರಮ ಸಂಖ್ಯೆ | ಲೆಕ್ಕಶೀರ್ಷಿಕೆ | 2008–09ರ ಅನುದಾನ (ರೂ.ಲಕ್ಷಗಳಲ್ಲಿ) |
|---|---|---|
| 24 | 2216 12ನೇ ಹಣಕಾಸು | |
| 25 | 2059 ಯೋಜನೆ | 235.00 |
| 26 | 2059 12ನೇ ಹಣಕಾಸು | 27.38 |

2008–09ನೇ ಸಾಲಿನಲ್ಲಿ ಶಿವಮೊಗ್ಗ ಲೋಇ ವಿಭಾಗಕ್ಕೆ ಆಯವ್ಯಯ ರಸ್ತೆ ಮತ್ತು ಸೇತುವೆ ಕಾಮಗಾರಿಗಳಿಗೆ ಒದಗಿಸಲಾದ ಅನುದಾನದ ವಿವರ .

| | | |
|---|---|---|
| 1 | ಇತರೆ ರಸ್ತೆ ನಿರ್ಮಾಣ ಹಾಗೂ ಡಾಂಬರೀಕರಣ | 8708.54 |
| 2 | 5054 ಸೇತುವೆಗಳ ನಿರ್ಮಾಣ | 490.41 |
| 3 | 5054 ಇತರೆ ರಸ್ತೆ ನಿರ್ಮಾಣ | – |
| 4 | 5054 ಕೇಂದ್ರ ರಸ್ತೆನಿಧಿ | 1400.80 |
| 5 | ವಿಶೇಷ ಘಟಕ ಯೋಜನೆ (ರಸ್ತೆ) | 181.13 |
| 6 | ವಿಶೇಷ ಘಟಕ ಯೋಜನೆ (ಸೇತುವೆ) | 7.00 |
| 7 | ಗಿರಿಜನ ಉಪಯೋಜನೆ (ರಸ್ತೆ) | 25.00 |
| 8 | 5054 ನಬಾರ್ಡ್ ಯೋಜನೆ (ಸೇತುವೆ) | 50.00 |
| 9 | 5054 ನಬಾರ್ಡ್ ಯೋಜನೆ (ರಸ್ತೆ) | 1828.35 |
| 10 | 3054 ಯೋಜನೆ | 1354.16 |
| 11 | 3054 12ನೇ ಹಣಕಾಸು | 525.19 |

**12. ಸಹಾಯಧನ ಕಾರ್ಯಕ್ರಮಗಳನ್ನು ಜಾರಿಗೊಳಿಸುವ ವಿಧಾನ ಅದಕ್ಕಾಗಿ ನಿಗದಿಗೊಳಿಸಲಾದ ಮೊತ್ತ ಮತ್ತು ಫಲಾನುಭವಿಗಳ ವಿವರ .**

– ಯಾವುದೂ ಇರುವುದಿಲ್ಲ –

**13. ರಿಯಾಯಿತಿಗಳನ್ನು ಪಡೆದವರ : ಅಧಿಕಾರ ಪತ್ರಗಳನ್ನು ಮಂಜೂರು ಮಾಡಿದ ಬಗ್ಗೆ ವಿವರಗಳು .**

–ಯಾವುದೂ ಇರುವುದಿಲ್ಲ–

**14. ವಿದ್ಯುನ್ಮಾನ ವ್ಯವಸ್ಥೆಯಲ್ಲಿ ಲಭ್ಯವಿರುವ ಮಾಹಿತಿಗಳ ವಿವರ.**

Web site No.eesmg@kpwd.gov.in.

**15. ಸಾರ್ವಜನಿಕ ಉಪಯೋಗಕ್ಕಾಗಿ ಪುಸ್ತಕ ಭಂಡಾರ ಅಥವಾ ವಾಚನಾಲಯವನ್ನು ನಿರ್ವಹಿಸುತ್ತಿದ್ದಲ್ಲಿ ಸಾರ್ವಜನಿಕರಿಗೆ ಮಾಹಿತಿ ಪಡೆಯಲು ಅಲ್ಲಿ ದೊರೆಯುವ ಸೌಲಭ್ಯಗಳು ಮತ್ತು ಕೆಲಸದ ಅವಧಿಯ ವಿವರಗಳು :**

–ಯಾವುದೂ ಇರುವುದಿಲ್ಲ–

**16. ಸಾರ್ವಜನಿಕ ಮಾಹಿತಿ ಅಧಿಕಾರಿಗಳ ಹೆಸರು ಹುದ್ದೆ ಇತ್ಯಾದಿ ವಿವರಗಳು :**

ಮಾಹಿತಿಹಕ್ಕು ಅಧಿನಿಯಮ 2005 (ಕೇಂದ್ರ ಅಧಿನಿಯಮ ಸಂ.22)ರ ಸೆಕ್ಷನ್ 5(1),5(2)ರ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಲೋ.ಇ.ಗೆ ಸಂಬಂಧಿಸಿದ ವಿಭಾಗ ಕಛೇರಿಯ ಕೆಳಕಂಡ ಅಧಿಕಾರಿಗಳನ್ನು ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ ಎಂದು ನೇಮಕಾತಿ ಮಾಡಲಾಗಿದೆ .

1) ಕಾರ್ಯಪಾಲಕ ಇಂಜಿನಿಯರ್, ಶಿವಮೊಗ್ಗ ವಿಭಾಗ ಸಾರ್ವಜನಿಕ ಮಾಹಿತಿ ಅಧಿಕಾರಿ.

2) ಡಿ.ಎಸ್. ನಾಗರಾಜ್, ತಾಂತ್ರಿಕ ಸಹಾಯಕರು, ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ.

**17. ನಿಗದಿಗೊಳಿಸಲಾಗುವ ಇತರೆ ಮಾಹಿತಿಗಳು :–**

ಸರ್ಕಾರವು ಮಾಹಿತಿ ಪಡೆಯುವ ಹಕ್ಕು ಅಧಿನಿಯಮಗಳನ್ನು ರಚಿಸಿದ ನಂತರ ಅದರಲ್ಲಿ ಬೇರೆ ಯಾವುದಾದರೂ ಮಾಹಿತಿಗಳನ್ನು ನಿಗದಿಗೊಳಿಸಿದಲ್ಲಿ ಅದನ್ನು ಅಳವಡಿಸಲಾಗುವುದು.

**ಜಿ.ಆರ್. ಚಂದ್ರಶೇಖರಪ್ಪ**
ಕಾರ್ಯಪಾಲಕ ಅಭಿಯಂತರು,
ಲೋ ಬಂ ಮತ್ತು ಒ ಜ ಸಾ ಇಲಾಖೆ,
ಶಿವಮೊಗ್ಗ ವಿಭಾಗ, ಶಿವಮೊಗ್ಗ

ಪಿ.ಆರ್.459

**OFFICE OF THE 10TH A.C.M.M. COURT, BANGALORE**

**DRAFT NOTIFICATION DATED:20TH MARCH, 2009**

It is hereby to the general public that the following unclaimed vehicles are in the custody of Mahadevapura Police Station, Bangalore. which are seized under various C.Miss Cases.

| Sl. No. | C.Miss No. and P.F. No. | Type of Vehicles | Registration No. Chasis No. & Engine No.of Vehicle |
|---|---|---|---|
| 1. | 559/07<br>PF No.141/07 | Bajaj Super Scooter, Blue Colour | No.CAP-4091<br>Eng No.053206701 |
| 2. | 560/07<br>PF No.142/07 | TVS Victor Silver Colour | KA-03-EH-9229,<br>Eng No. N3303M478451 |
| 3. | 561/07<br>PF No.143/07 | TVS Victor Silver & Blue Colour | KA-05-EW-1049,<br>Eng No.0F4C51088008 |
| 4. | 562/07<br>PF No.144/07 | Sujuki Samurai Black Colour | KA-03-W-4779<br>Eng No.780M144401 |
| 5. | 563/07<br>PF No.148/07 | TVS Champ | AP-09, A-6392<br>Chasis No.D006F366403 |
| 6. | 564/07<br>PF No.149/07 | LML Verpa Scooter | KL-08-J-2261, Cha No.C4JD682602 |
| 7. | 565/07<br>PF No.150/07 | Kinetic Honda | KA-01-E-7080<br>Eng No.201464NIEGG |
| 8. | 584/07<br>PF No.154/07 | Kinetic Honda Red Colour | KA-03-V-8687<br>Eng No.850960NIE08 |
| 9. | 585/07<br>PF No.155/07 | TVS-50<br>Green Colour | KA-03-K-2715<br>Eng No.A303F7330048 |
| 10. | 586/07<br>PF No.156/07 | TVS-50<br>Green Colour | CAE-1038,<br>Eng No.113880781<br>Cha No.11330781 |
| 11. | 587/07<br>PF No.157/07 | Suzuki Samurai Red Colour | KA-03-, 1616,<br>Eng No.7408M481407<br>Cha No.7408F439196 |
| 12. | 589/07<br>PF No.158/07 | Bajaj Pulsar Black Colour | KA-03-EK-4248<br>Eng No. BHERDKE56307 |
| 13. | 590/07<br>PF No.159/07 | Premier Car White Colour | CTO-8008 |
| 14. | 598/07<br>PF No161/07 | Hero Honda Motor Cycle | TN-31, B-5817,<br>Eng No.98E10684<br>Chasis No.98E2F00535 |

Any person's having right to claim the above vehicle shall approach the Mahadevapura Police Station with necessary documents with in Two months from the date of this publication any failing which the above vehicle will be confiscated to Government.

Any claims received after the due date will no be emtertained.

Inspector of Police,

PR-464 Mahadevapura Police Station, Bangalore-560048.

**PROCEEDINGS OF ASSISTANT COMMISSIONER OF COMMERCIAL TAXES, LOCAL VAT OFFICE-025, BANGALORE**

**Present:** Narasappa, Asst. Commissioner of Commercial Taxes.

**Subject:** Loss of "C" Form in case of M/s Westfalia Separator India Pvt Ltd., #7B, Bommasandra Industrial Area, Hebbagodi, Bangalore-560100.

**Read:** Letter Dated: 19.02.2009 of M/s Westfalia Separator India Pvt Ltd., Bangalore.

**Preamble:**

M/s Westfalia Separator India Pvt Ltd., Bangalore-560099 is a registered dealer born on the files of this office bearing TIN 29050219932. The company in its letter cited at read above has intimated that the following "C" Form issued by the department have been lost in transit.

1) TCK-R 3668588

The company has adduced the proof for having filed the complaint to police authorities for loss of above "C" Form and executed Indemnity Bond in favour of the Government as laid down under Rule 12(2) and 12(9) of CST Act, 1956.

In the instant case since the 'C' Forms mentioned as above, is stated to be lost in transit, the forms so lost is treated as invalid. Hence this order.

**ORDER NO.ACCT/LVO-025/2008-09, DATED:28TH MARCH, 2009**

In view of the circumstances explained as above, the following "C" form are treated as invalid with immediate effect.

| C Forms No. | Date of Issue |
|---|---|
| 1) TCK-R 3668588 | 18.09.2008 |

Assistant Commissioner of Commercial Taxes,
L.V.O-025, Bangalore.

**STATEMENT SHOWING LOSS OF "C" FORMS IN THE FOLLOWING CASES IN THE OFFICE OF THE A.C.C.T, L.V.O.-025, BANGALORE**

| Sl. No. | Number (Including Code No.) of declaration Forms Lost destroyed or stolen | Name and address of the dealer to whom declaration Forms/is/are issued by the department with date of C form issue | Registration Certificate No.of the dealer under CST Act, 1956 | The address of the dealer to whom the declaration is/are sent | Date of issue of Form/s by the dealer | Whether Lost/ Stolen destroyed | Remarks |
|---|---|---|---|---|---|---|---|
| 1. | TCK-R 3668588 | M/s Westfalia Separator India Pvt Ltd., # 7B, Bommasandra Industrial Area, Hebbagodi, Bangalore-560099 | TIN-29050219932 | M/s GEA Ecoflex Private Limited-A/7, Sector-10, Noida-201301 | 18.09.2008 | Lost | Value Rs.26,28,763-00 |

Assistant Commissioner of Commercial Taxes,
L.V.O-025, Bangalore.

PR-301

**POLICE DEPARTMENT**

**PROCEEDINGS OF THE COMMISSIONER OF POLICE BANGALORE CITY**

**Sub:** Controlling of places of public amusements.

**Preamble:**

Whereas, a large number of theatres, multiplexes and video theatres exhibiting cinematographic films admitting members of the public for consideration are functioning within the limits of Commissionerate of Police, Bangalore City.

2. Whereas, the theatres and multiplexes exhibiting cinematograph films to which members of the public are admitted for a consideration are included in the definition of Places of Public Amusements as defined in Sub Section 14 of Section 2 of The Karnataka Police Act, 1963, and the Commissionerate of Police, Bangalore City has not insisted so far, that these places of public amusement being run in the form of theatres and multiplexes should obtain a licence under the Karnataka Licencing and Controlling of Places of Public Amusements (Bangalore City) Order, 2002, as these theatres and multiplexes exhibiting cinematographic films are obtaining licences under the Cinemotograph Act, 1952 and the rules made thereunder and The Karnataka Cinemas (Regulation) Act, 1964 and the Commissioner of Police, Bangalore City is vested with the responsibility of maintaining law and order in the limits of the Commissionerate of Police, Bangalore City.

3. Whereas it is observed that different theatres and multiplexes exhibiting cinematograph films are following different times for exhibition of films and that there is no uniformity in the timings of the film shows and many of the cinema theatres and multiplexes situated in the limits of Commissionerate of Police, Bangalore City are exhibiting films up to 1.30 A.M., and the Karnataka Cinemas (Regulation) Act, 1964 Rule 41-A provides that cinematograph shows shall not commence before 10 A.M. and after 10 P.M. The observance of different timings for cinematograph shows by different theatres and multiplexes and in many cases, conducting the cinematograph shows up to 1.30 A.M. has given scope for incidents having a bearing on public order and also has given scope for problems in regulation of traffic, prevention of untoward incidents, prevention of crime and also has given scope for serious problems in effectively policing the city and ensuring smooth and fe flow of traffic. Therefore, in view of the need for preservation of public order and prevention of crime, it is necessary to prescribe uniform timings for exhibition of cinematograph shows in respect of the theatres and multiplexes situated in the limits of Commissionerate of Police, Bangalore City. This matter has been discussed in detail with the representatives of the Karnataka Film Chamber of Commerce at a meeting held in Vidhana Soudha under the Chairmanship of the Hon. Home Minister on 19.05.2009. After detailed deliberations, the Government were pleased to prescribed that all cinematograph shows shall start everyday, not before 10 A.M. and shall close not later than 11 P.M.

4. Therefore, it is necessary to control the period during which the theatres and multiplexes will exhibit cinematograph film shows, in the interest of preservation of public order prevention of untoward incidents, prevention of crime and smooth and safe traffic.

Hence the following order.

**Order No. MAG(1)/AM/2/2009-10, Dated:21st May, 2009**

I Shankar Bidari, Commissioner of Police, Bangalore City, in exercise of powers vested with me under section 31, Sub Section 1 of the Karnataka Police Act, 1963 hereby order that, all the theatres and multiplexes situated in the limits of the Commissionerate of Police, Bangalore City, will exhibit cinematograph film shows between 10 A.M. and 11 P.M. everyday. The theatres and multiplexes exhibiting cinematograph film shows are at liberty to adjust their show timings within the permitted period i.e., from 10 A.M. to 11 P.M.

